# ಕೊರವಂಜಿ

ಮಾರ್ಚಿ ೧೯೫೦



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ದಾಶರಥಿ ದೀಕ್ಷಿತ್
ಶ್ರೀಮತಿ ಟಿ. ಸುನಂದಮ್ಮ
ಶ್ರೀ|| ಗಂಗಾಧರ
ಶ್ರೀ|| ಪಾಟಾಳಿ
ಶ್ರೀ|| ಹಾ. ರಾ.
ಶ್ರೀ|| ಪ್ರಸಾದ್
ಶ್ರೀ|| ರೇವಣ್ಣ
ಶ್ರೀ|| ಶಿವು

ಇತ್ಯಾದಿ, ಇತ್ಯಾದಿ.

ಚಿತ್ರನಗೆಯ ಮಾಸಪತ್ರಿಕೆ

ಬಿಡಿ ಪ್ರತಿ :– ಕೇವಲ ನಾಲ್ಕಾಣೆ.

ಈ ದಿನವೇ ನೋಡಿ !



ಎ.ವಿ.ಯಂ.ರವರ

# ಜೀವನ

ತಮಿಳು.

ಕುಮಾರಿ ವೈಜಯಂತಿ ಮಾಲ

ಟಿ ಆರ್ ರಾಮಚಂದ್ರನ್

ಕೆ ಸಾರಂಗಪಾಣಿ ಎಸ್ ವಿ ಸಹಸ್ರನಾಮಮ್ ದ್ರೌಪದಿ ಲಲಿತ ಪದ್ಮಿನಿ

**ಬೆಂಗಳೂರು**

**ಸೂಪರ್ ಮಿನರ್ವ . ನ್ಯೂಆಪೆರಾ**

**ಮೈಸೂರು ರಾಜಕಮಲ್ ಚಿತ್ರಮಂದಿರಗಳಲ್ಲಿ**

— ಈ ದಿನವೇ ನೋಡಿ —

ಶೀಘ್ರದಲ್ಲಿಯೇ ಇತರ ಕೇಂದ್ರಗಳಲ್ಲಿ ಪ್ರದರ್ಶನವಾಗುವ ತಾರೀಖನ್ನು ಗಮನಿಸಿ.



**A TALLAM RELEASE**

ರಸಿಕರಿಗೆ ಅಚ್ಚುಮೆಚ್ಚಾದುವು

# ಮೈಸೂರು ರೇಷ್ಮೆ ವಸ್ತ್ರಗಳು

## ಮಿತವ್ಯಯ - ಹಾಗೂ, ಸುರುಚಿ.

**ಮೈಸೂರು ರೇಷ್ಮೆ**

ಸಮಾಜದಲ್ಲಿ ಮೇಲ್ಮೆಯ ಕುರುಹು
ಮುತ್ಸಂಜೆಯಲ್ಲಿ ಅನುಪಮವಾದುದು



ಜಾರ್ಜೆಟ್, ಕ್ರೇಪ್,

ಜಾರ್ಜೆಟ್ ಮತ್ತು ಕ್ರೇಪ್ ಸೀರೆಗಳು

ಮನಸೆಳೆವ ಮಾದರಿಗಳು

ಇಂಧಿನ ಅಂದದ ರಂಗುಗಳು.

---

ಸರ್ಕಾರಿ ರೇಷ್ಮೆ ನೇಯುವ ಕಾರ್ಖಾನೆ,

ಮೈಸೂರು

"ನನ್ನ ಟೀ ಪಾತ್ರೆಯು ಚೊಕ್ಕ ಬೆಳ್ಳಿಯದು!"

"[ತನ್ನಲ್ಲಿ] ಅದರೆ, ಅವರಲ್ಲಿ ಉತ್ತಮ ಟೀ ತಯಾರಿಸಲು ಆಕೆಗೆ ಗೊತ್ತಿಲ್ಲವಲ್ಲಾ!"

ಉತ್ತಮ ಟೀ ಜೀವನದಲ್ಲಿ ಅತ್ಯಂತ ದಯಾಪೂರಿತವಾದ, ಅತ್ಯಂತ ಅಗ್ಗಕ್ಕೆ ದೊರೆಯುವ ಸುಖಗಳಲ್ಲೊಂದಾಗಿದೆ; ಉತ್ತಮ ಟೀ ಅಭಿಮಾನಿಗಳಿಗೆ, ಅದನ್ನು ಉತ್ತಮ ರೀತಿಯಲ್ಲಿ ತಯಾರಿಸಿ ಕೊಡದವರನ್ನು ಕಂಡರೆ, ಗೌರವವಿಲ್ಲ. ಉತ್ತಮ ಗೃಹಿಣಿಯ ಕರ್ತವ್ಯವೆಂದರೆ, ತನ್ನ ಸೇವಕರು ಉತ್ತಮ ಟೀಯನ್ನು ತಯಾರಿಸುವ ಸುಲಭ ಸೂತ್ರಗಳನ್ನು ತಿಳಿದಿದ್ದಾರೆಂಬ ಬಗ್ಗೆ ನಿಷ್ಕರ್ಷೆಯಾಗಿ ತಿಳಿಯುವುದು ಮತ್ತು ಅವರಾಸೂತ್ರಗಳನ್ನು ತಪ್ಪದೆ ಅನುಸರಿಸುವಂತೆ ಮಾಡುವುದು. ಈ ಕರ್ತವ್ಯವನ್ನು ಪಾಲಿಸದಿದ್ದರೆ, ಉತ್ತಮ ನಡೆವಳಿಗೆ ತಪ್ಪಿದಂತೆಯೇ ಆಗುತ್ತದೆ.




ಈ ಪಂಚಸೂತ್ರ ಕ್ರಮವನ್ನನುಸರಿಸಿ

# ಉತ್ತಮ ಟೀ ತಯಾರಿಸಿಕೊಳ್ಳಿರಿ

'ಟೀ ಬಗ್ಗೆ ಸೂಚನೆ' ಎಂಬ ಚಿಕ್ಕ ಉಚಿತ ಪುಸ್ತಕ ಬೇಕೆಂದು ಥೀ ಮರ್ಜನ್, ಸೆಂಟ್ರಲ್ ಟೀ ಬೋರ್ಡು, ಪೋಸ್ಟು ಬಾಕ್ಸು ನಂ. 2172, ಕಲಕತ್ತೆ-1-ಇವರಿಗೆ ಬರೆದು ತರಿಸಿಕೊಳ್ಳಿರಿ.



ಸೆಂಟ್ರಲ್ ಟೀ ಬೋರ್ಡಿನವರ ಪ್ರಚುರಣೆ

CTBK 32



ಸಂಪುಟ ೮ | ಮಾರ್ಚಿ ೧೯೫೦ | ಸಂಚಿಕೆ ೧೨

★★

# ಕುಹಕಿಡಿಗಳು

★★

ಈ ಸಾರಿ "ಯುಗಾದಿ"ಯ ಆಚರಣೆಯನ್ನು ಹಾರ್ಮೋನಿಯಂ ಮೇಲೆ "ಜನ ಘಣ ಮಣ" ಬಾರಿಸುತ್ತಾ ಶುರು ಮಾಡುತ್ತಾರಂತೆ.—

—ಪೋಲೀಸಿನವರ ಕಾವಲು ಸಾಕಷ್ಟು ಇದೆಯಂತೆ.

* * *

ಗಿಲೆಟ್ ಕಂಪೆನಿಯವರು ತಿರುಪತಿಯಲ್ಲಿ ಒಂದು ಶಾಖೆಯನ್ನು ಏರ್ಪಡಿಸುತ್ತಾರೆಂಬುದು ಸುಳ್ಳಂತೆ.

—ಮಠದವರೇ ಅದನ್ನು ಮಾಡಬೇಕೆಂದಿರುವರಂತೆ.

* * *

ಶೃಂಗ ಗಿರಿಯ ಕೋಡನ್ನು ಹಿಡಿದಿದ್ದ ಸರ್ಕಾರವು ಈಗ ಹಿಡಿತವನ್ನು ಸಡಿಲಪಡಿಸಿದೆಯಂತೆ.

* * *

ಒಬ್ಬ ಮಹಾಶಯನಿಗೆ ಖಾಲಿ ಕವರೊಂದು ತಲಪಿತಂತೆ.

—ಅವನು ಗುಜರಾಯಿಸಿದ ಅರ್ಜಿಗೆ ಅಧಿಕಾರಿಗಳ ಉತ್ತರ ಇರಬಹುದಲ್ಲವೇ ?

* * *

ವರಮಾನ ತೆರಿಗೆ ಕಛೇರಿಯಲ್ಲಿ ಒಂದು ಚೇಳು ಸಿಕ್ಕಿತಂತೆ.

—ಅಲ್ಲಿನ ಸಾಹೇಬರು "ಎಲಾ! ನಾನೇ ಇರುವಾಗ ಇದೆಲ್ಲಿ ಬಂತು, ಬಂದವರನ್ನ ಕುಟುಕುಕ್ಕೆ" ಎಂದು ಅದನ್ನ ಕೊಂದು ಹಾಕಿದರಂತೆ.

"ಮಾರ್ಷಲ್ ಏಡ್" ತೆಗೆದುಕೊಂಡ ದೇಶಗಳಲ್ಲೆಲ್ಲಾ ಅಮೇರಿಕನ್ನರು 'ಮಾರ್ಷಲ್‌ಲಾ' ಜಾರಿಗೆ ತರುತ್ತಾರೆ ಎಂದು ಪ್ರಾವ್ಡಾ ಹೇಳುತ್ತಿದೆಯಂತೆ.

* * *

ದಕ್ಷಿಣ ಭಾರತದಲ್ಲಿ ಅಕಾಲವೃಷ್ಟಿ ಆಯಿತಂತೆ.

—ನಾವು ಅನಧಿಕಾರ ಟೆಸ್ಟ್ ಗೆದ್ದರೆ ಮಳೆ ಬರದೇ ಇರುತ್ತ್ಯೆ!

* * *

'ಚಿಲ್ಲರೆ ವ್ಯಾಪಾರಿಗಳು' ಅಂತ ಬೋರ್ಡು ಹಾಕಿಕೊಂಡಿರುತ್ತಾರೆ. ಹೋಗಿ ಕೇಳಿದರೆ 'ಚಿಲ್ಲರೆ ಕೊಡೋದಿಲ್ಲ', ಎಂದು ಒಬ್ಬರು ಪತ್ರ ಬರೆದಿದ್ದಾರೆ.

* * *

ಬೀಡಿ ಕಾರ್ಖಾನೆಯ ಹಲವರು ಬೀಡಿಗಳಿಗೆ ಇನ್ನು ಮೇಲೆ ಕಂಟ್ರೋಲ್ ಹಾಕಬೇಕು ಎಂದು ಚಳುವಳಿ ಹೂಡಬೇಕೆಂದಿದ್ದಾರಂತೆ.

—ಕಂಟ್ರೋಲ್ ಹಾಕಿದರೆ, ಈಗಿರುವ ದರಕ್ಕಿಂತ ಹೆಚ್ಚಾಗಿಯೇ ಹಾಕಬಹುದು—ಯಥಾ ಪ್ರಕಾರ—ಎಂದು ಅವರ ಆಶೆ.

* * *

ರೈಲ್ವೆ ಬಡ್ಜೆಟ್ಟಿನಲ್ಲಿ ೧೦-೧೪ ಕೋಟಿ ಉಳಿತಾಯವಂತೆ.

—ನಾವು ಕೊಟ್ಟ ಹಣ ಅಲ್ಲಿಗೆ ಹೋಯ್ತು—ಕಳಿಸಿದ ಸಾಮಾನೂ ಅಲ್ಲಲ್ಲೇ ಹೋಯ್ತು—ಎಂದು ಒಬ್ಬ ಹುಚ್ಚ ಬರೆದಿದ್ದಾನೆ.

* * *

ಪಾನ ನಿರೋಧ ಆರಂಭವಾದ ಮೇಲೆ ಈಗೀಗ ಈಚಲ ಮರದ ಕೆಳಗೆ 'ಮಜ್ಜಿಗೆ ಬಾರ್'ಗಳನ್ನು ಸ್ಥಾಪಿಸಿದ್ದಾರಂತೆ.

* * *

ವಿದೇಶಗಳಿಂದ ಔಷಧಿಗಳನ್ನು ತರಿಸಿಕೊಳ್ಳಲು ಏನೂ ಕಷ್ಟವಿಲ್ಲ.
(ಸರ್ಕಾರೀ ಹೇಳಿಕೆ)

—ಹೊಟ್ಟೆಗಿಲ್ಲದೆ ಸಾಯುವ ಬದಲು, ಔಷಧಿ ಕುಡಿದು ಸಾಯಲಿ ಎಂಬ ಘನೋದ್ದೇಶ!

* * *

ಗೀಷಾ ಹುಡುಗಿಯರು ನಕ್ಕರೆ ಮೊಗವೆಲ್ಲಾ ಕೆಂಪಾಗುತ್ತದಂತೆ.

—ನಮ್ಮ ಸ್ನೇಹಿತರು ನಕ್ಕರೆ ಮೊಗವೆಲ್ಲಾ ಹಲ್ಲಾಗುತ್ತದೆ ಅಷ್ಟೆ.

---

# ಉರಿಗಾಳು

ಮಾರ್ಚಿ ೧೯ನೆಯ ತಾ||ನಿಂದ ಹಿಂದೂಸ್ತಾನದಲ್ಲೆಲ್ಲಾ ಹೊಸ ವರ್ಷ ಪ್ರಾರಂಭವಾಗುವುದೇ ಹೊರತು, ಹೊಸಯುಗ ಪ್ರಾರಂಭವಾಗುವುದಿಲ್ಲವೆಂದು ಮಹಾಜನಗಳಿಗೆ ಮುನ್ನೆಚ್ಚರಿಕೆ ಕೊಡಲು ಬಯಸುತ್ತೇನೆ.

*　　　*　　　*

ನಮ್ಮ ದೇಶ ಅತಿ ಬೇಗನೆ ಪಂಚಾಯಿತಿ ರಾಜ್ಯವಾಗಬೇಕು. (ಭಾಷಣ) ಮಂತ್ರಿಮಂಡಲದ ಪುನರ್ರಚನೆ ವಿಷಯದಲ್ಲೇ ಅಷ್ಟೊಂದು ಪಂಚಾಯಿತಿ ನಡೆದದ್ದರಿಂದ ನಾವು ನಿರಾಶರಾಗಬೇಕಾದಿಲ್ಲ.

*　　　*　　　*

"ರಷ್ಯಾದಲ್ಲಿ ೨೫ ಸಾವಿರ ಯುದ್ಧವಿಮಾನಗಳಿವೆ" (ಚರ್ಚಿಲ್) ಬರಿಯ ಆಕಾಶ ಪುರಾಣ.

*　　　*　　　*

"ಹೈದ್ರಾಬಾದ್ ಕಾಂಗ್ರೆಸ್ಸಿನಲ್ಲಿ ಮತ್ತೆ ಬಿಕ್ಕಟ್ಟು" (ಶಿರೋನಾಮೆ) ಹಿಂದೆ ಬಿದ್ದಿದ್ದ ಆ ಪ್ರಾಂತದ ರಾಜಕೀಯ ಇತರ ಪ್ರಾಂತಗಳ ಮಟ್ಟಕ್ಕೆ ಬಂದಿದೆ ಎಂಬುದಕ್ಕೆ ಇದೂ ಒಂದು ನಿದರ್ಶನವಲ್ಲವೆ?

*　　　*　　　*

"ಜಾತಿ ಭೂತವನ್ನು ತೊಲಗಿಸಲು ತಾವು ಇನ್ನು ಮುಂದೆ ಜಾತಿ ಸೂಚಕ ಹೆಸರುಗಳನ್ನು ಉಪಯೋಗಿಸುವುದಿಲ್ಲವೆಂದು ೩೦ ವಕೀಲರು ನಿರ್ಧರಿಸಿದಾರೆ".... ಅವರು ಯಾರಿಗೂ ಸರ್ಕಾರಿ ಚಾಕರಿ ಬೇಕಿಲ್ಲವೆಂದು ತೋರುತ್ತದಲ್ಲಾ.

*　　　*　　　*

ವಿಶ್ವೇಶ್ವರಯ್ಯ ನಾಲಾ ಪ್ರದೇಶದಲ್ಲಿ ಆದಷ್ಟು ಬೇಗ ಭಾವಿಗಳನ್ನು ತೋಡಲು ಸರ್ಕಾರ ಪ್ರಯತ್ನಿಸುತ್ತಿದೆ....ಆಪತ್ ಕಾಲದಲ್ಲಿ ಬಾವಿಯೇ ಆಸರೆ.

*　　　*　　　*

ಹೈಡ್ರೊಜನ್ ಬಾಂಬು ಪ್ರಯೋಗದ ಭೂಲೋಕ ಇಷ್ಟರಲ್ಲೇ ನಾಶವಾಗುವುದರಿಂದ, ಅಮೇರಿಕಾ ದೇಶದಲ್ಲಿ ಸುಖಭೋಗ ಸಾಮಗ್ರಿಗಳ ಮಾರಾಟವೂ, ವರ್ಲ್ಡ್ ಬ್ಯಾಂಕಿಗೆ ಸಾಲದ ಅರ್ಜಿಗಳೂ, ಈಚೆಗೆ ಬಹಳ ಹೆಚ್ಚಿವೆಯಂತೆ.

*　　　*　　　*

ಲಂಚಕ್ಕೆ ಕೈನೀಡುವುದೇ ಕಚೇರಿಗಳಲ್ಲಿ ಮುಖ್ಯ ಕಾರ್ಯಕ್ರಮವಾಗಿ ಬಿಟ್ಟಿದೆ" (ಪತ್ರಿಕೆ) ಕೈಗಾರಿಕೆಯ ಅಭಿವೃದ್ಧಿಗೆ ಇದೂ ಒಂದು ಕುರುಹು.

* * *

ಮದ್ರಾಸ್ ಮಂತ್ರಿಗಳ ಮೇಲೆ ಬಸ್ ಪರ್ಮಿಟ್ ಕೊಡಾಣಿಕೆ, ನೌಕರಿಗೆ ನೇಮಿಸುವಿಕೆ ಇತ್ಯಾದಿ ವಿಷಯಗಳಿಗಾಗಿ ಬಂದ ದೂರನ್ನು ಮರೆತುಬಿಡುವಂತೆ ಕಾಂಗ್ರೆಸ್ ನಾಯಕರು ಆಜ್ಞೆ ಮಾಡಿದಾರೆ........ದೂರಿದ ಬೆಟ್ಟ ನುಣ್ಣಗೆ!

* * *

ಬೆಂಗಳೂರು ನಗರದಲ್ಲಿ ಸಾಕಷ್ಟು ಲೌಡ್‌ಸ್ಪೀಕರುಗಳಿಲ್ಲದಿರುವುದರಿಂದ ಕಾರ್ಪೊರೇಷನ್ ಚುನಾವಣೆಯನ್ನು ಮುಂದು ಹಾಕಲಾಗಿದೆ ಎಂಬ ವದಂತಿಗೆ ಆಧಾರ ಸಾಲದಂತೆ.

* * *

೨೫೦ ಅಡಿ ಎತ್ತರದ ಸ್ತೂಪವನ್ನು ಮದ್ರಾಸ್ ಸಮುದ್ರ ತೀರದಲ್ಲಿ ಗಾಂಧಿಯವರ ಹೆಸರಿನಲ್ಲಿ ಕಟ್ಟಿದರೆ, ಅವರ ತತ್ವಗಳು, ಯಾರ ಕೈಗೂ ಎಟುಕದೆ ಪರಿಶುದ್ಧವಾಗಿ ಉನ್ನತಸ್ಥಾನದಲ್ಲಿ ಕಂಗೊಳಿಸುತ್ತವೆ, ಎಂದು ದೇಶನಾಯಕರು ಹೇಳುತ್ತಿರುವರು.

* * *

"ಈ ಗ್ರಾಮದ ಸುತ್ತಲೂ ಜನರು ಅನೇಕ ಮರಗಳನ್ನು ಕಡಿಯುತ್ತಿದಾರೆ" (ವರದಿ) ಸದ್ಯಃ, ಅವರ ಕೋಪದಾಹಗಳು ಆ ರೀತಿಯೇ ಶಮನವಾಗಲಿ.

* * *

ಜೋಗದ ಜಲಪಾತವು ಪ್ರತಿ ಭಾನುವಾರ ಇತರೇ ದಿವಸಗಳಂತೆಯೇ ಕೆಲಸಮಾಡಲು ಏರ್ಪಾಟು ಮಾಡಲಾಗಿದೆ ಎಂದು ತಿಳಿಸಲಾಗಿದೆ.

* * *

ಹೊಸ ಮಂತ್ರಿಗಳು ತಮಗೆ ಅಭಿನಂದನಾ ಸಂದೇಶ ಕಳುಹಿಸಕೂಡದೆಂದು ಕಟ್ಟುಮಾಡಿದ್ದರಿಂದ ಟಪಾಲ್ ಇಲಾಖೆ ವರಮಾನ ಕಡಮೆ ಬೀಳಬಹುದೆಂದು ಭೀತಿಪಡಲಾಗಿದೆ.

* * *

---

# ಒರಳುಕಲ್ಲು

---

ಸುಬ್ಬಣ್ಣನಿಗೆ ನಲವತ್ತು ವಯಸ್ಸಾದರೂ, ಸಂಬಳ ನಲವತ್ತು. ಅವನು ಒಂದು ಅಂಗಡಿಯಲ್ಲಿ ಗುಮಾಸ್ತೆ. ಸಾಹುಕಾರನಿಗೆ ಪ್ರಾಣ, ನಂಬಿಕಸ್ಥ, ಕತ್ತೆ ಹಾಗೆ ದುಡಿಯುತ್ತಾನೆ, ಕೈ ಶುದ್ಧ—ಎಲ್ಲ ಸರಿ; ಆದರೆ, ದರಿದ್ರರೇಖೆ ಕೈ ತುಂಬ. ಸಂಸಾರ ಸಾಗಿಸೋದು ಬಲು ಕಷ್ಟ. ಸಂಜೆ, ಮನೆಗೆ ಬರುತ್ತಾ ಯಾವುದೇ ಒಂದು ಪೇಪರಲ್ಲಿ ಶಿರೋನಾಮೆ ನೋಡಿದ. "ಜೇಬು ಕಳ್ಳರ ಹಾವಳಿ; ಗುಮಾಸ್ತರ ಕಿಸೆಯಿಂದ ೧೦೦೦ ರೂ. ಅಪಹರಣ" ಎಂದಿತ್ತು. ಆರು ಕಾಸು ಕೊಟ್ಟು ಓದಿದ. ಸುಬ್ಬಣ್ಣನನ್ನೂ ಅವನ ಸಾಹುಕಾರ ಆಗಾಗ ಅರಸೀಕೆರೆ, ಹಿಂದೂಪುರ, ಬಂಗಾರಪೇಟೆ ಮುಂತಾದ ಊರುಗಳಿಗೆ ಸಾವಿರ ಸಾವಿರದೈನೂರು ನಗದು ಸಹಿತ ಗಿರಾಕಿಗಳಿಗೆ ಕೊಟ್ಟು ಬರಲು ಕಳುಹಿಸುವುದುಂಟು. ಅವನಿಗೆ ಒಂದು ದುರ್ಯೋಚನೆ ಹೊಳೆಯಿತು.

'ದುರ್' ಏನು ಮಹಾ? ಇಷ್ಟು ವರ್ಷ ದುಡಿದದ್ದಕ್ಕೆ ಅವನೇ ನನಗೆ ಮನಸಾರ ಕೊಡಬೇಕಾಗಿದ್ದದ್ದನ್ನ ನಾನೇ ಪಡೆಯುತ್ತೇನೆ, ಅಷ್ಟೆ ತಾನೆ? ಸಾವಿರ ಅಂದ್ರೆ, ಅವನೇನು ಮುಳುಗಿ ಹೋಗೋದಿಲ್ಲ. ನಾನೋ, ಉದ್ಧಾರ ಆಗಿ ಹೋಗುತ್ತೇನೆ. ಮಗಳ ಮದುವೆಗಾಗುತ್ತೆ. ಆ ಪುಣ್ಯ ಅವನಿಗೇನೆ—ಎಂದೆಲ್ಲ ಯೋಚಿಸಿ, ನಿರ್ಧರಿಸಿದ.

ಇದಾದ ಎಂಟನೆಯ ದಿನ, ಸಾಹುಕಾರರು ಸುಬ್ಬಣ್ಣನನ್ನು ಕರೆದು, ಮೂರು ಗಂಟೆ ಗಾಡಿಗೆ ಕುಪ್ಪಂ ತನಕ ಹೋಗಬೇಕಪ್ಪ, ಇಕೋ! ೧೪೦೦ ರೂ. ಹುಷಾರಾಗಿ ತಲಪಿಸು" ಎಂದರು. ಭಾಗ್ಯಲಕ್ಷ್ಮಿಯೇ ಬಾಗಿಲಲ್ಲಿ ಬಡಿದ ಹಾಗಾಯಿತು, ಸುಬ್ಬಣ್ಣನಿಗೆ....... ಅದೃಷ್ಟಕ್ಕೆ ಸರಿಯಾಗಿ, ಅವನ ಹೆಂಡತಿ ಮಕ್ಕಳೆಲ್ಲ ಯಾವುದೋ ನಂಟರ ಮನೆಗೆ, ಮದುವೆ ಸಮಾರಂಭಕ್ಕೆ ತೊಲಗಿದ್ದರು. ನೆಟ್ಟಗೆ ಮನೆಗೆ ಹೋಗಿ, ಒರಳುಕಲ್ಲಿನ ಗುಳಿಯೊಳಗೆ ನೋಟುಗಳನ್ನಿಟ್ಟು ಹಲಗೆಯಿಂದ ಮುಚ್ಚಿದ. ಬರೀ ಕಿಸೆಯೊಡನೆ, ರೈಲು ಸ್ಟೇಷನಿಗೆ ಹೋದ.

ಜನರ ನೂಕು ನುಗ್ಗಲು ಹೆಚ್ಚಿದ್ದ ಕಿಟಕಿಯ ಹತ್ತಿರ ಹೋಗಿ ಟಿಕೀಟಿಗಾಗಿ ಒದ್ದಾಡಿದ. "ಹೇಯ್! ದಾರಿ, ಸದ್ದು" ಎಂದೆಲ್ಲ ಸುತ್ತ ಕಿರಿಚುತ್ತಿದ್ದರು. ತಕ್ಷಣ ಸುಬ್ಬಣ್ಣ, ವಿಕಾರವಾಗಿ "ಅಯ್ಯೋ" ಎಂದು ಗೋಳಿಟ್ಟ. ಕಳ್ಳ, ಕಳ್ಳ

ಎಂದು ಕೂಗಿದ. ಹರಕು ಚಿಂದಿಯನ್ನುಟ್ಟ ಒಬ್ಬಿಬ್ಬರನ್ನ ಪೋಲೀಸರು ಅಟ್ಟಿಸಿಕೊಂಡು ಓಡಿದರು. ಸ್ಟೇಷನ್ನಿನಲ್ಲಿ ದೂರು ಬರೆದುಕೊಟ್ಟು, ಸುಬ್ಬಣ್ಣ ಮನೆಗೆ ನಡೆದ. ನೆಲದ ಮೇಲೆ ಕಾಲು ಊರದೆ ಗಗನಮಾರ್ಗದಲ್ಲೇ ಸಂಚರಿಸಿದಂತಿತ್ತು, ಅವನ ಹಿಗ್ಗಿನ ನಡೆ.

ಸುಬ್ಬಣ್ಣ ಇದ್ದದ್ದು ಒಂದು ಔಟ್ ಹೌಸು. ಹೊರಮನೆಯ ಗೇಟ್ ಹತ್ತಿರ ಗುಂಪು ಸೇರಿತ್ತು. ಅವನಿಗೆ ಆಶ್ಚರ್ಯವಾಯಿತು. ಹಿಮ್ಮನೆಯ ಬಾಗಿಲಲ್ಲಿ ಅಂದರೆ, ತನ್ಮನೆಯ ಬಾಗಿಲಲ್ಲಿ ಸಂದಣಿ ಇನ್ನೂ ಜೋರು. ಅವನಿಗೆ ಭಯವಾಯಿತು. ಅದರ ನಡುವೆ ಒಬ್ಬ ಪೋಲೀಸಿನವನೂ ಇದ್ದ. ಅವನ ಹೃದಯ ಪಟಪಟನೆ ಬಡಿಯಿತು. ಅವನ ಮನೆ ಬಾಗಿಲು ತೆರೆದಿತ್ತು; ಬೀಗವನ್ನು ಒಡೆದು ಅವನ ಮನೆಗೆ ಕಳ್ಳರು ನುಗ್ಗಿದ್ದರು; ಹೊರಕ್ಕೆ ಹೊರಟು ಹೋಗಿದ್ದರು. ಒಳಕ್ಕೆ ಧಾವಿಸಿ ಒರಳುಕಲ್ಲು ನೋಡಿದ. ನೋಟುಗಳ ಮಂಗಮಾಯ. ಅದೃಷ್ಟ ಅಂದರೆ, ಹೀಗೂ ಬಡವರನ್ನು ಬಡಿಯಬೇಕೆ? ಹೊರಗೆ ಬರುತ್ತಲೂ, ಪೋಲೀಸಿನವನು, "ಏನೇನು ಸಾಮಾನು ಹೋಗಿದೆ, ಹೇಳಿ ಸ್ವಾಮಿ" ಎಂದ. ಅಮ್ಮಾವರ ಸೀರೆ ಒಂದು, ಮಗು ಊಟಮಾಡುವ ಹಿತ್ತಾಳೆ ತಟ್ಟೆ ಒಂದು, ಅಷ್ಟೆ!" ಎಂದು ಅವನು ಹೇಳಿ, ನಿಟ್ಟುಸಿರುಬಿಟ್ಟ.

ಅಷ್ಟರೊಳಗೆ, "ಕಳ್ಳ ಸಿಕ್ಕ, ಕಳ್ಳಸಿಕ್ಕ" ಎನ್ನುತ್ತ, ಮತ್ತೊಬ್ಬ ಪೋಲೀಸಿನವನು ಅಲ್ಲಿಗೆ ಕೇಡೀ ಸಹಿತ ಬಂದ. ಅವನ ಕಿಸೆಯನ್ನು ಶೋಧಿಸಿದಾಗ, ೧೪೦೦ ರೂಪಾಯಿ ನೋಟಿನ ಗಂಟು ಇತ್ತು. "ಈ ಮನೆ ಒರಳುಕಲ್ಲಿನಲ್ಲಿ ಸಿಕ್ಕಿತು, ಸ್ವಾಮಿ....ತೆಗೆದುಕೊಂಡದ್ದುಂಟು. ಇನ್ನೂ ಎಣಿಸಿ ನೋಡಲಿಲ್ಲ" ಎಂದು ಅವನು ಪೋಲೀಸಿನವನ ಕಾಲು ಹಿಡಿದ.

"ನಿಮ್ಮ ಒರಳುಕಲ್ಲಿನಲ್ಲಿ ಹೇಗ್ರಿ ಈ ರೂಪಾಯಿ ಬಂತು? ಏನೂ ಹೋಗಿಲ್ಲ ಅಂತ ಯಾಕ್ರಿ ಹೇಳಿದಿರಿ? ಬನ್ರಿ, ನೀವೂ ಸ್ಟೇಷನಿಗೆ" ಎಂದು ಸುಬ್ಬಣ್ಣನವರನ್ನು, ಅವರು ಅರ್ಧ ಗಂಟೆ ಹಿಂದೆ ದೂರು ಬರೆದುಕೊಟ್ಟಿದ್ದ ಠಾಣೆಗೇ ಕರೆದೊಯ್ದರು.

---

ಅಪ್ಪನ ಜತೇಲಿ ಉಂಡರೇನು?
ಈ ಕಾಲದಲ್ಲಿ
ಅಮ್ಮನ ಜತೇಲಿ ಉಂಡರೇನು
ತುಪ್ಪದ ಹೆಸರೂ ಇಲ್ಲದಾಗ!







ಬೆಲೆ ಇಲ್ಲದ ಬರಹ.

ಟೆಸ್ಟ್ ಏನೋ ಗೆದ್ದರಪ್ಪ! ಆದರೂ ಅಷ್ಟು ಕ್ಯಾಚು ಬಿಡೋಣ ಎಂದರೇನಪ್ಪಾ! ಹೈಸ್ಕೂಲ್ ಹುಡುಗರು ಕೂಡ ಹಾಗೆ ಆಡುಲ್ಲಪ್ಪ! ಎಂದ ಒಬ್ಬ ಕಾಲೇಜ್ ವಿದ್ಯಾರ್ಥಿ.

ಅದಕ್ಕೆ ಕನ್ನಡ ಸಂಘದ ಕಾರ್ಯದರ್ಶಿ ಉತ್ತರ ಹೇಳಿದ.

"ಅಲ್ಲಾ ಕಣೋ! ನಮ್ಮ ಭಾರತದ ಟೆಸ್ಟ್ ಟೀಮಿಗೆ ಆಯ್ಕೆ ಆಗಬೇಕಾದರೆ, ಆಟಗಾರ ಏನೇನು ಮಾಡಬೇಕು ಗೊತ್ತೆ? ಮೊದಲು ತನ್ನ ಕ್ಲಬ್ಬಿನ ಆಡಳಿತಗಾರರನ್ನು ಬೆಣ್ಣೆ ಹಚ್ಚಿ ಅಲ್ಲಿ ಆಯ್ಕೆ ಆಗಬೇಕು. ನಂತರ ತಾಲ್ಲೂಕು ಕ್ರಿಕೆಟ್ ಸಂಸ್ಥೆಯ ಆಡಳಿತಗಾರರಿಗೆ ಬೆಣ್ಣೆ ಹಚ್ಚಬೇಕು. ನಂತರ ಡಿಸ್ಟ್ರಿಕ್ಟ್ ಕ್ರಿಕೆಟ್ ಸಂಸ್ಥೆಯ ಉತ್ತರಾಧಿಕಾರಿಗಳಿಗೆ ಬೆಣ್ಣೆ ಹಚ್ಚಬೇಕು. ನಂತರ ಪ್ರೊವಿನ್ಷಿಯಲ್ ಕ್ರಿಕೆಟ್ ಸಂಸ್ಥೆಯ ಆಡಳಿತಗಾರರಿಗೆ ಬೆಣ್ಣೆ ಹಚ್ಚಬೇಕು. ನಂತರ ಭಾರತದ ಕ್ರಿಕೆಟ್ ಸಂಸ್ಥೆಯ ಗುರು ಸಮಿತಿಗೆ ಬೆಣ್ಣೆ ಹಚ್ಚಬೇಕು.

ಇಷ್ಟು ಸಾರಿ ಬೆಣ್ಣೆ ಹಚ್ಚಿ, ಬೆಣ್ಣೆ ಹಚ್ಚೀ, ಆಟಕ್ಕೆ ಇಳಿದರೆ, ಬೆರಳು ಜಾರುಲ್ಲವೇ. ಕೈ ಸಡಿಲ ಆಗುಲ್ಲವೇ? ಅವರುಗಳು ಕ್ಯಾಚು ಬಿಟ್ಟದ್ದು ಹೆಚ್ಚಲ್ಲ. ಹಿಡಿದಿದ್ದೇ ಆಶ್ಚರ್ಯ ಕಣೋ! ಬ್ಯಾಟೇ ಅವರ ಕೈಯಿಂದ ಜಾರದೇ ಇದ್ದದ್ದೇ ಆಶ್ಚರ್ಯ ಕಣೋ!" ಎಂದು.

———

# ಪ್ರಶ್ನೆಗೆ—ಉತ್ತರ

[ಕೆಳಕಂಡ ಮಾತುಗಳನ್ನು ಯಾರು ಯಾರಿಗೆ ಯಾತಕ್ಕೆ ಯಾವ ಸಂದರ್ಭದಲ್ಲಿ ಎಲ್ಲಿ ಹೇಳಿದರು ಎಂಬುದನ್ನು ಕೆಲವೇ ಮಾತುಗಳಲ್ಲಿ ಹೇಳಿರಿ. ನಿಮ್ಮ ಉತ್ತರವನ್ನು ನಮ್ಮ ಉತ್ತರದೊಡನೆ ಹೋಲಿಸಿ ಸರಿನೋಡಿ.]

## —( ಪ್ರಶ್ನೆಗಳು )—

1. "ಸುಮ್ಮಗಿರಯ್ಯ ಕಂಡಿದ್ದೀನಿ ನಿನ್ನ ಸಾಚಾತನ... ನನ್ನ ಪಾಲು ನನಗೆ ಕೊಡು—ಸುಮ್ಮನೆ ಬೆಕ್ಕಿನ ಹಾಗೆ ಕಣ್ಣು ಮುಚ್ಚಿ ಹಾಲು ಕುಡೀಬೇಡಾ!...."

2. "ಜನನೀ ...ಕಾಡಿನಲ್ಲಿನ ಮೃಗಪಕ್ಷಿಗಳು ಕೂಡಾ ತಮ್ಮ ಮಕ್ಕಳನ್ನು ಅಕ್ಕರೆಯಿಂದ ಕಾಪಾಡುವಾಗ—ನೀನು ಹೀಗೆ ಮಾಡಲು ನಾನು ಮಾಡಿದ ಅಪರಾಧವೇನಮ್ಮಾ.. ."

3. "ಕನ್ನಡವೇ ನನ್ನ ಜೀವ—ಕನ್ನಡವೇ ನನಗೆ ಅನ್ನ—ಕನ್ನಡಮ್ಮ ನನ್ನ ಕೈಯ್ಯಾರ ಜೋಡಿಸಿ ಆಡಿಸಿ ಸರಿನೋಡುವೆ...."

4. "ಹೋದ್ರೆ ಓಯ್ತು ಬಿಡ್ರಮ್ಮಣ್ಣಿ—ಅದು ನಮ್ಮದಲ್ಲ—ನೀರಾಗ ಬಂದಿದ್ದು ನೀರಾಗೋಯ್ತು—ಹಾಲ್ನಾಗೆ ಬಂದಿದ್ದು ಉಳಕೊಂತು....ಆಲು ಆಲು, ನೀರು ನೀರೇ...."

5. "ನಮ್ಮೂರಿನಲ್ಲಿ ಕಾಳುಸಂತೆ ಕೊರಮರಿಗೆ ಸಂತೆ ಚೌಕದಲ್ಲಿ ಛಡಿ ಏಟು .. ನಿಮ್ಮೂರಲ್ಲಿ?. .."

6. "ನಾಳೆ....ನಾಳೆ ಬನ್ನಿ ಕೋಪ ಯಾಕೆ—ನಾಳೆ ಖಂಡಿತ ಬನ್ನಿ.... ಹೂಂ ಬನ್ನಿ—ನಾಳೆ ಬನ್ನಿ"

7 a. ಹಾ ರಾಮ್! ಹಾ ರಾಮ್!!

7 b. ಬೆಟ್ಟ ಜೀವನಾಧಾರ....ಮೈಸೂರು—ಮೈಸೂರೂ"

## —( ಉತ್ತರಗಳು )—

1. ಶಾಖಾಯ ಲವಣಾಯ ಪ್ರಿಯ ಗುಮಾಸ್ತೆ ಗುಂಡಯ್ಯ ತನ್ನ ಅಸಿಸ್ಟೆಂಟು ಸಕ್ಕರೆ ಸೋಮಯ್ಯ ತನ್ನನ್ನು ಯಾಮಾರಿಸಿದಾಗ.

2. ತ್ಯಾಗವೀರ ಕರ್ಣ ನಾಟಕದಲ್ಲಿ ಕರ್ಣ ಪಾತ್ರಧಾರಿ ಪುಟ್ಟೋರಪ್ಪ — ಕುಂತಿ ಪಾತ್ರಿ ಕೆಂಚಯ್ಯನಿಗೆ ಹೇಳಿದ್ದು, ಪುಟ್ಟೋರಯ್ಯನ ತಾಯಿಯು ಕೂಸಿದ್ದಾಗಲೇ ಅವನನ್ನು ಸಾಕಲಾರದೆ ಕಂಪನಿ ಜೊತೆಗೆ ಬಿಟ್ಟು ಮತ್ತೆ ದೊಡ್ಡವನಾದಾಗ ಸಿಕ್ಕು ಹೀಗೆ ಹೇಳಿದನೆಂದು ಕೆಲವರ ವಾದ.—(ಎರಡು ಉತ್ತರವೂ ಸರಿ.)

3. ಕನ್ನಡ ಕಂಪಾಜಿಟರ್ ಕೋದಂಡರಾಮು—ಸಾಹಿತಿ ಸಾಂಬಶಿವನಿಗೆ. ಸಾಂಬಶಿವ, "ನಿನಗೆಲ್ಲಿ ಕನ್ನಡದಲ್ಲಿ ಪ್ರೇಮ" ಎಂದು ಮೂದಲಿಸಿದಾಗ —ವಿಚಿತ್ರ ಪ್ರಿಂಟರಿಯಲ್ಲಿ ಸಂಜೆ ಆರು ಗಂಟೆ ಸಮಯದಲ್ಲಿ ಕೋದಂಡರಾಮು ಧರ್ಮಾಂಬುದಿಕೆರೆ ದಂಡೆಯಲ್ಲಿ ವಾಕಿಂಗ್ ಹೋದದ್ದರಿಂದ ಹಾಗೆ ಹೇಳಿದನೆಂದು ಕೆಲವರ ವಾದ. (ಎರಡೂ ಸರಿ)

4. ನಮ್ಮ ಮನೆಗೆ ಹಾಲು ಕೊಡೋ ರುದ್ರಮ್ಮ ಎರಡು ಬೆಳ್ಳಿ ಹಾಲು ಗಡಗ ಮಾಡಿಸಿದ್ದಳು. ನಮ್ಮ ಮನೆಗೆ ಬರುವಾಗ ಅವಳು ಚಿಕ್ಕ ಕಾಲುವೆ ದಾಟಿ ಬರಬೇಕು. ಮಳೆ ಬಂದು ಕಾಲುವೆ ತುಂಬಿದಾಗ, ದಾಟಿ ಬರುವಾಗ, ಒಂದು ಕಾಲು ಬಳೆ ನೀರಲ್ಲಿ ಹೊರಟುಹೋಯಿತು. ನಮ್ಮಾಕೆ ಹೋಯ್ತಲ್ಲಾ ಎಂದು ಮರುಗಿದಾಗ ಹೀಗೆ ಹೇಳಿದಳು ರುದ್ರಮ್ಮ. (ಶಹಣೆ ಆಕೆ)

5. ಷೇಕ್ ಅಬ್ದುಲ್ಲಾ—ತುಂಬಿದ ಸಭೆಯಲ್ಲಿ ನಮ್ಮ ಮಂತ್ರಿಗಳ ಮುಂದೆ—ಛೆ! ಹಾಗೆನ್ನ ಬಹುದೆ?

6. ನಾಗೋಜಿ—ದರ್ಜಿ ನಾಗೋಜಿ—ನೂರ್ಕೊಟಿ ನಿನ್ನೆಗಳ ಜೊತೆಗೆ ಇನ್ನೊಂದು ನಾಳೆಯ ಸೇರಿಸಲು, ನಾನು ಕೋಟು ಆಯಿತೆ? ಎಂದಾಗ ಹಾಗೆ ಹೇಳಿದ್ದು.

7 a. ... ಫಿಲಂ ಕಂಪನಿಗೆ ಸಾಲ ಕೊಟ್ಟ ಸೇಟ್ ಗಮ್ಮತ್‌ಲಾಲ್— ಅವರ ಸ್ಟಾರ್ ಅರ್ಧ ಪಾರ್ಟುಮಾಡಿ ಪಲಾಯನ ಮಾಡಿದಾಗ ...ಮಹಾತ್ಮರ ಕಡೆಯ ವಾಣಿ ಎಂದು ಕೆಲವರು ಹೇಳುವರು. ಮಹಾತ್ಮರ ಸದಾ ವಾಣಿ ಅದು ಅಲ್ಲವೆ?—

7 b. "ನಮಸ್ಕಾರ ಇದು ಆಕಾಶವಾಣಿ ಮೈಸೂರು" ಇವರು ಹೇಳಿದ್ದು. (ಮೊದಲನೆಯ ಉತ್ತರಕ್ಕೆ ಪೂರ್ತಿ ನಂಬರು. ಎರಡನೆಯದಕ್ಕೂ ಅರ್ಧ ನಂಬರು)

8. "ದೇಶ್ ಬಾಂಧವಾ....ದೇಶ ಸಾಮ್ರಾಜ್ಯದಾಹಿ ರಾಕ್ಷಸೀ ಮಹತ್ವಾಕಾಂಕ್ಷೆಯ ಕಟುಕರ ಕೈಲಿರುವಾಗ ನಾವೇನು ಮಾಡೇವು—ನಿಮ್ಮ ತ್ಯಾಗ—ನಿಮ್ಮ ಸ್ಟ್ರೈಕು—ನಿಮ್ಮ ಸಹಕಾರದಿಂದ ನಮ್ಮ ಸಂಸ್ಥೆಗೆ ಬೆಂಬಲ ನೀಡಿ—ಜೋಳಿಗೆ ಹಿಡಿದು "ಅಣ್ಣಾ ಅಪ್ಪಾ" ಎಂದು ಹಳ್ಳಿ ಹಳ್ಳಿ ತಿರುಗಿ ಅನ್ನ ಸಮಸ್ಯೆ ಬಗೆಹರಿಸುತ್ತೇವೆ—ಹಸಿದ ಹೊಟ್ಟೆಗೆ ಅನ್ನ—ಬೆತ್ತಲೆ ಮೈಗೆ ಬಟ್ಟೆ—ಜೈ ಜೈ—ಮಹಾತ್ಮ ಗಾಂಧೀಕಿ ಜೈ...."

9. "... ಒಪ್ಪತ್ತು ಊಟ ಬಿಡಿ... ನಿಮ್ಮ ಸ್ವಂತ ಸುಖಕ್ಕೆ ಹೆಚ್ಚು ಗಮನ ಬೇಡ—ತ್ಯಾಗ—ದೇಶಕ್ಕಾಗಿ ದುಡಿಯಿರಿ—ಹೆಚ್ಚು ಬೆಳೆಯಿರಿ—ಕಷ್ಟ ಪಡಿ—ಬಂದ ಸ್ವರಾಜ್ಯ ಉಳಿಯಲು ದುಡಿ ದುಡಿ ದುಡಿ—ಒಪ್ಪತ್ತು ಊಟ ಬಿಡಿ—ಬಿಡಿ ಬಿಡಿ....ಊಟ ಬಿಡಿ...."

10. "....ತಾರತಮ್ಮಯ್ಯ ರಘುಕುಲ ರಾಮ ಚಂದಿರನ...."

---



ಇವನನ್ನ ಕೇಳೋರೇ ಎಲ್ಲಾ.



ಇವಂನ್ನ ಕೇಳೋರೇ ಇಲ್ಲಾ.

8. "ನಂಬದಿರು ಈ ಮಾತು ಸತ್ಯವಲ್ಲ...." ಎಂದು ಆಗಲೇ ಹೇಳಿದೆ ನಲ್ಲಾ ಎಂದರೊಬ್ಬರು. ಈ ಪ್ರಶ್ನೆಗೆ ಉತ್ತರ—ಯಾರು ಯಾರಿಗೂ ಹೇಳೋ ಹಾಗಿಲ್ಲ—ಎಲ್ಲರಿಗೂ ಯಾರೋ ಹೇಳಿದರು ಎಂದು ಮಾತ್ರ ಹೇಳಬಹುದು. (ಈ ಪ್ರಶ್ನೆಗೆ ಉತ್ತರ ಬರಿದೆ ಇದ್ದರೂ ಪೂರ್ತಿ ನಂಬರು ಬರುತ್ತೆ).

9. ಯಾರು ಹೇಳಿದರೇನು ಬಿಟ್ಟರೇನು....ರೇರ್ಷ ಹಿಟ್ಟಿ ಇಲ್ಲದಾಗ ನಿತ್ಯಾ ಊಟಾ ಬಿಡೋವಾಗ....ಚಿವರ್ಲ್ಲಿ ಕಾರು—ಬಂಗ್ಲೆವಾಸ—ಸುಣ್ಣದ ತಿಳಿ ಕುಡಿಯೋನಿಗೆ ಸಣ್ಣಕ್ಕಿ ತಿನ್ನೊ ಇಸಮು ಹೇಳಿದ್ದು. (ಇದಕ್ಕೊ ಉತ್ತರ ಬರಿದೆ ಇದ್ರೆ ಪೂರಾ ನಂಬ್ರು).

10. "ಮಂತ್ರಿ ಮಂಡಲ ರಚಿಸು" ಎಂದಾಗ—ಡೆಲ್ಲಿಯಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ - ಯಥಾ ರಾಜ, ತಥಾ ಪ್ರಜಾ—

ಅಂತೂ ನಿಂತೂ ಸಂಪತ್ತೂಗೆ ಸಂಜೆಗವಳ ಅಂಥಾಗೆ—ಹಳೆ ಗಂಡನ ಪಾದವೇ ಗತಿ.

—ದಾಶರಥಿ ದೀಕ್ಷಿತ್.

---




* * *

ಜಫರುಲ್ಲಾ ಖಾನರು ಅಮೇರಿಕಾದಲ್ಲಿ 'ತೋಳ ಬಂತು! ತೋಳ ಬಂತು!' ಅಂತ ಯೂನೋದಲ್ಲಿ ಮೊದಲು ಕೂಗಿದರಂತೆ.

—ಈಗ ಪೋಲೀಸಿನವರ ಹತ್ತಿರ ಹೋಗಿ ತೋಳ ಬರ್ತಿದೆ—ತೋಳ ಬರ್ತಿದೆ ಅಂತ ಕೂಗ್ತಾ ಇದ್ದಾರಂತೆ.

* * *

# ಹೊಸ ರಿಕಾರ್ಡು

ಅಮೇರಿಕಾ ದೇಶದ ಭಾಗವತರು ಅವರು. ಅಂದರೆ, ಸಂಗೀತ ಸಾಹಿತ್ಯ ಅಭಿನಯ ಎಲ್ಲದರಲ್ಲೂ ಪ್ರಖ್ಯಾತರು. ಅಂದ ಮೇಲೆ, ಸಿನಿಮಾ ಚಪಲವೂ ಉಂಟು, ಸಿನಿಮದಲ್ಲಿ ನಟಿಸುವ ಚಪಲ. ಆದ್ದರಿಂದ, ಕೋಟ್ಯಾಧೀಶ್ವರರು. ಹೋದಲ್ಲೆಲ್ಲ ಜನಸ್ತೋಮ; ನಿಂತಲ್ಲೆಲ್ಲ ಮಂಗಳಾರತಿ; ಕೂತಲ್ಲೆಲ್ಲ ನೈವೇದ್ಯ. ಸಂಗೀತದಲ್ಲಿ ರಾಗಾಲಾಪನೆ ಮಾಡುವಾಗ ರವೆ ಅಂತಾರಲ್ಲಾ, ಆ ರವೆ ರವೆ ಯಷ್ಟು ಹೇಳಿದರೂ, ಅದಕ್ಕೆ ಒಂದೂವರೆ ಡಾಲರ್ ಸಂಪಾದನೆ.

ಅವರ ಮನೆ, ಪತ್ನೀ ಸಮೇತರಾಗಿ ತಮ್ಮ ದಿವಾನ್‌ಖಾನೆಯಲ್ಲಿ ಮಂಡಿ ಸಿದಾರೆ. ಆಗ ಆಕೆ, "ನಾಥಾ! ನಾನು ಈಗ ತಾನೆ ಒಂದು ಹೊಸ ರಿಕಾರ್ಡನ್ನು ಅಂದರೆ, ಹಾಡಿನ ತಟ್ಟೆಯನ್ನು ತಂದಿರುವೆನು. ಇದನ್ನು ಈ ಗ್ರಾಮಾಫೋನ್ ಯಂತ್ರದಲ್ಲಿರಿಸಿ, ಚಕ್ರ ಸುತ್ತಿ, ಮೊಳೆ ತಗುಲಿಸಿ, ಹಾಡಿಸುತ್ತೇನೆ ...ಅದು ಯಾವ ಹಾಡು, ಯಾವ ದೇಶದ್ದು, ಯಾವ ವಾದ್ಯದ್ದು ಎಂದು ಪತ್ತೆ ಹಚ್ಚಿ ನುಡಿವುದೇ ನಿನಗೆ ನಾನು ಕೊಡುವ ಪ್ರಥಮ ಕಜ್ಜಂ" ಎಂದಳು. ಅಂತೆಯೇ ಮಾಡಿದಳು. ನಾಥ ಊಹಿಸತೊಡಗಿದ.

ಪಾಪ! ಅದರೊಳಗಿಂದ ಬರುತ್ತಿದ್ದ ಭಯಂಕರ ರಾಕ್ಷಸ ಧ್ವನಿಗಳು ಅವನ ಕಿವಿಗಳನ್ನೊಡೆದುವು. ಯಮಲೋಕದ ಚಿತ್ರಹಿಂಸೆಯೇ ಅದಕ್ಕಿಂತ ಮೇಲೆನಿ ಸಿರಬೇಕು, ಅವನಿಗೆ. ಮಾನವನೂ, ದಾನವನೂ ಆ ವಾದ್ಯವನ್ನು ಮಾಡಿರ ಲಾರ; ನುಡಿಸಿರಲಾರ. "ಗಂಟು ಕಟ್ಟಿರುವ ದಿಮ್ಮಿಯನ್ನು ಗರಗಸದಿಂದ ಕುಯ್ಯುವ ಸದ್ದು?" ಎಂದು ಊಹಿಸಿದರು. ಅಲ್ಲ, ಎಂದಳಾಕೆ ನಗುತ್ತ. "ಹೊಟ್ಟೆಶೂಲೆ ಬಂದ ನೀರು ಕುದುರೆಯ ಕೆನೆತ?" ಅದಕ್ಕೂ ಆಕೆ ಅಲ್ಲ ಎಂದಳು. ಇನ್ನೇನಿರಬಹುದು?" ಬೋನಿಗೆ ಸಿಕ್ಕಿ ಕಾಲು ಮುರಿದುಕೊಂಡು ತಪ್ಪಿಸಿಕೊಳ್ಳಲಾರದೆ ಗೋಳಾಡುತ್ತಿರುವ ಗೂಬೆ" ಎಂದರು. ಊಹುಂ, ಅದೂ ಅಲ್ಲ. "ನೆಗಡಿ ಹಿಡಿದಿರುವ ಹಾರ್ಮೋನಿಯಮನ್ನು ಕಾಡುಬೆಕ್ಕು ಬಾರಿಸು ತ್ತಿದೆ" ಎಂದರು. ಅಲ್ಲ, ಅದೂ ಅಲ್ಲ, ಎಂದು ಆಕೆ ತಲೆ ಆಡಿಸಿದಳು. ಕಡೆಯ ದಾಗಿ ಮತ್ತೊಂದು ಸಲ ಊಹಿಸಿ ಪಂದ್ಯವನ್ನು ಗೆದ್ದೇಬಿಡೋಣವೆಂದು ಸಂಗೀತ ಶಿಖಾಮಣಿ, "ಕಂಬಿ ತಪ್ಪಿ ನೆಲಕ್ಕುರುಳಿದ ರೈಲ್ವೆ ಎಂಜಿನ್ನಿನ ಕೂಗು" ಎಂದರು. ಅದೂ ತಪ್ಪು ಎಂದು ಆಕೆ ಹೇಳಿಬಿಟ್ಟಳು.

"ಹಾಗಾದರೆ ಏನಿದು? ನೀನೇ ತಿಳಿಸು" ಎಂದು ಅವರು ಅಂಗಲಾಚಿದರು. ಆಕೆ ಅಂದಳು: "ಇದನ್ನು ನಾನು ನಿನ್ನೆ ನಮ್ಮ ಮನೆಯಲ್ಲೇ ನೀವು ನಿದ್ರೆ ಮಾಡುತ್ತಿದ್ದಾಗ ರಿಕಾರ್ಡು ತೆಗಿಸಿದೆ....ಇದು, ನಿಮ್ಮ ಗೊರಕೆ."

---

# "ತರಪೇತು"

"ಹದಿನೆಂಟು ಕಛೇರಿ"

ತೀರ್ಥರೂಪರಿಗೆ ಬಾಲಕನ ಸಾಷ್ಟಾಂಗ ನಮಸ್ಕಾರಗಳು,
ಆದಾಗಿ ಉಭಯ ಕುಶಲೋಪರಿ ಸಾಂಪ್ರತಿ.

ತಮ್ಮ ಆಶೀರ್ವಾದ ಬಲದಿಂದ, ಹಾಗೂ ನಿಮ್ಮ ಹಳೇ ಸ್ನೇಹಿತರು ಮಂತ್ರಿಗಳಾದ ದೆಸೆಯಿಂದ ನನಗೇನೋ ಈ ಕಛೇರಿಯಲ್ಲಿ ಕಾಲಿಡಲು ಅನುಕೂಲವಾಯ್ತು. ಈ ಕಛೇರಿಯಲ್ಲಿ ಒಬ್ಬ ಮುದುಕ ಆರ್ಡರ್ಲಿ ಇದಾನೆ. ಹಣವಾನ್ ಸಿಂಗ್ ಅಂತ ಅವನು ಹೆಸರು ಹೇಳಿಕೊಳ್ಳುತ್ತಾನೆ. ನಿಮ್ಮ ಕಾಲದಲ್ಲಿ ಕೆಲಸಕ್ಕೆ ಸೇರಿದನಂತೆ. ನಿಮ್ಮ ಜ್ಞಾಪಕ ಎಲ್ಲಾ ಚೆನ್ನಾಗಿ ಹೇಳುತ್ತಾನೆ. ಅವನೇ ಹೇಳಿದ್ದು "ನೀವು ಕೂತುಕೊಳ್ಳುತ್ತಿದ್ದ ಕುರ್ಚಿಯನ್ನೇ ನನಗೆ ಕೊಟ್ಟಿದ್ದಾರೆ" ಅಂತ.

ಇಲ್ಲಿ ಹನ್ನೊಂದು ಗಂಟೆಗೆ ಕೆಲಸಕ್ಕೆ ಬಂದರೆ ಮಧ್ಯಾಹ್ನ ಒಂದು ಗಂಟೆ ತನಕ ಏನು ಮಾಡಲೂ ಆಗುವುದಿಲ್ಲ ಅವರಿವರು ಬಾರದಿರುವ ಕಾರಣ. ಆ ಮೇಲೆ ಕೇವಲ ಒಂದು ಗಂಟೆಯಲ್ಲಿ ನನ್ನ ಪಾಲಿನ ಕೆಲಸವನ್ನೆಲ್ಲಾ ಮುಗಿಸಬಹುದು. ಆ ಮೇಲೆ ಸಂಜೆ ತನಕ ನೊಣ ಹೊಡೆಯೋಣ ಅಂದರೆ ಈ ಕಛೇರೀಲಿ ನೊಣ ಕೂಡ ಹಾರಾಡುಲ್ಲ ಎಲ್ಲಾ ನಿದ್ರೆಮಾಡ್ತಾ ಇರುತ್ತವೆ. ಆದ್ದರಿಂದ ದಯವಿಟ್ಟು ಅಮರಕೋಶ ಕಳಿಸಿದರೆ ಈಗಲಾದರೂ ಅದರ ವ್ಯಾಸಂಗ ಪ್ರಾರಂಭಿಸುತ್ತೇನೆ. ರಿಟೈರ್ ಆಗೋಹೊತ್ತಿಗೆ ಸಂಸ್ಕೃತ ಜ್ಞಾನ ಸ್ವಲ್ಪ ಸಂಪಾದಿಸಿಕೊಂಡು, ರಿಟೈರ್ ಆದಮೇಲೆ ಹುಡುಗರನ್ನು ಹೆದರಿಸಲು ಆ ಸಂಸ್ಕೃತ ಜ್ಞಾನವನ್ನು ಉಪಯೋಗಿಸಿಕೊಳ್ಳಬಹುದು.

ಮಾತೋಶ್ರೀಯವರ ಮತ್ತು ಇತರರ ಕ್ಷೇಮಕ್ಕೆ ಕಾಗದ ಬರಿಯುತ್ತಿರಬೇಕು.

ಇಂತಿ ನಮಸ್ಕಾರಗಳು,
ಕು. ರಾ ಸಂಚಿಗಯ್ಯ.

* * *

ಚಿ|| ಸಂಚಿಗಯ್ಯನಿಗೆ, ರಾಮಯ್ಯನ ಆಶೀರ್ವಾದಗಳು, ನಿನ್ನ ಪತ್ರ ತಲಪಿ ಸಕಲವೂ ಅಭಿಪ್ರಾಯವಾಯ್ತು. ಹನುಮಾನ್ ಸಿಂಗ್ ಇನ್ನೂ ಕೆಲಸದಲ್ಲಿದ್ದಾನೆಯೇ ? ನನ್ನ ಕಾಲಕ್ಕೇ ಅವನಿಗೆ ಐವತ್ತು ಮೀರಿತ್ತು. ಅವರುಗಳಿಗೆ

"ಸಿವಿಲ್ ಲಿಸ್ಟ್" ಇಲ್ಲದೇ ಇರೋದೇ ಅನುಕೂಲ. ಸುಳ್ಳು ಹೇಳೋ ಗೋಜಿಲ್ಲ. ನಾನು ಜ್ಞಾಪಿಸಿಕೊಂಡೆ ಅಂತ ಹೇಳು. ಅವನು ಮಾತನಾಡುವುದೇ ಚೆನ್ನ. ಅಕ್ಷರಗಳನ್ನು ತಪ್ಪಾಗಿ ಉಚ್ಚರಿಸಿ ಹೊರಳಿಸ್ತಾನೆ ನೋಡು. ಎಂಥಾ ಶುಕ ಮುನಿಗೂ ನಗು ತಡೆದುಕೊಳ್ಳುಕ್ಕೆ ಆಗುಲ್ಲ. ನಕ್ಕರೆ ಕೂಡಲೆ ಒಂದು ಬೀಡಿ ಕೊಟ್ಟು ರಾಜಿ ಮಾಡಿಕೋ ಬಹುದು.

ಇನ್ನೂ ಹಸಿ ಹುಡುಗ ನೀನು, ಕಛೇರಿಗೆ ಸೇರಿದ ಮೇಲೆ ಯಾರಿಗೆ ಯಾವಾಗ ಕಾಗದ ಬರೆದರೂ "ತುಂಬಾ ಕೆಲಸವಿದ್ದುದರಿಂದ" ಎಂದು ಅಲ್ಲಲ್ಲೇ ಹೇಗಾದರೂ ಸೇರಿಸಬೇಕು.

ನನ್ನ ಕುರ್ಚಿ, ಮೇಜೇ ನಿನಗೂ ಸಿಕ್ಕಿದೆ ಎಂದು ಬರೆದಿದ್ದೀ. ಹಾಗಾದರೆ ಆ ಮೇಜಿನ ಎರಡನೇ ಡ್ರಾಯರಿನಲ್ಲಿ ನಿನ್ನ ಜಾತಕವನ್ನು ಇಟ್ಟಿದ್ದೆ. ಯಾರೂ ಅದನ್ನು ತೆಗೆದಿರಲಾರರು. ಆ ಡ್ರಾಯರು ತೆಗೆದು ಆ ಜಾತಕವನ್ನು ಕಳಿಸು.

ಇದರ ಜತೆಗೆ ನಮ್ಮೂರಿನ ಬೇಲದ ಹಣ್ಣನ್ನು ಕಳಿಸಿದ್ದೇನೆ. ನನ್ನ ಮಿತ್ರರಿಗೆ ಅದನ್ನು ಕಂಡರೆ ಬಲು ಖುಷಿ. ಅವರ ಮನೆಗೆ ಅದನ್ನು ನೀನೇ ಖುದ್ದು ಕೊಟ್ಟು ಬಾ ಹಾಗೇ ಅವರ ಇಲಾಖೆಯಲ್ಲಿ ಅವರ ಸೇವೆ ಮಾಡಲು ಬಹಳ ಆಶೆ ಎಂದೂ ಸೂಚಿಸು.

ಆಗಿಂದಾಗ್ಗೆ ಕಾಗದ ಬರೆಯುತ್ತಿರು—ಮುಂದೆ ಬೇಕಾದರೆ ಅಮರಕೋಶ ಕಳಿಸುತ್ತೇನೆ.

ಇಂತೀ ಆಶೀರ್ವಾದಗಳು,

ಕುಂದೂರು ರಾಮಯ್ಯ.

* * *

ಶ್ರೀ|| ಪಾದಪದ್ಮಂಗಳಿಗೆ ಬಾಲಕನ ನಮಸ್ಕಾರಗಳು—

ಬೇಲದ ಹಣ್ಣನ್ನು ತಲಪಿಸಿದೆ. ನನ್ನ ಪುಣ್ಯ! ಅವರ ಮನೆಗೆ ಹೋದಾಗ ಅವರ ಹೆಂಡತಿ ಹೂವಿಳ್ಳಕ್ಕೆ ಅಣಿ ಮಾಡಿಕೊಂಡಿದ್ದರು. ಬೇಲದ ಹಣ್ಣನ್ನು ಆಕೆಯೇ ಇಟ್ಟುಕೊಂಡರು. ಅವರೇ ಸಾಹೇಬರ ಹತ್ತಿರಕ್ಕೆ ಕರೆದುಕೊಂಡು ಹೋದರು. ಅವರೂ ನಿಮ್ಮನ್ನೂ ವಿಚಾರಿಸಿದರು, ಅವರ ಇಲಾಖೆಗೆ ವರ್ಗ ಆಗಿದೆ ಈಗ. ಎರಡನೇ ಡ್ರಾಯರನ್ನು ತೆಗೆದೆ. ಅಲ್ಲೇ ಇತ್ತು ಜಾತಕ ಅದನ್ನೇ ಕಳಿಸಿದ್ದೇನೆ. ಅಲ್ಲದೆ ಆ ಡ್ರಾಯರಿನಲ್ಲಿ ಒಂದು ಬೆಳ್ಳಿ ಕಟ್ಟಡದ ಕನ್ನಡಕ ಇದೆ. ಅದು ನಿಮ್ಮದೇ ? ನಿಮಗೆ ಕಳಿಸಲೇ ?

ತುಂಬಾ ಕೆಲಸ ಇರುವುದರಿಂದ ಹೆಚ್ಚು ಬರೆಯಲು ಪುರುಸತ್ತಿಲ್ಲ, ದಯವಿಟ್ಟು ಕ್ಷಮಿಸಿ.

ಬೇಕಾದಾಗ ಅಮರಕೋಶ ಕಳಿಸಿ ಎಂದು ಬರೆಯುತ್ತೇನೆ.

ಇಂತಿ ಸಾಷ್ಟಾಂಗ ನಮಸ್ಕಾರಗಳು,

ಕು. ರಾ. ಸಂಚಿಗಯ್ಯ.

* * *

ಪ್ರಿಯ ಕುಮಾರ !

ಭೇಷ್ ! ನಿನ್ನ ಕಾಗದ ನೋಡಿದೆ ಆ ಕನ್ನಡಕ ನಾನು ಕೆಲಸಕ್ಕೆ ನೇರಿದಾಗಲೇ ಆ ಡ್ರಾಯರಿನಲ್ಲಿತ್ತು. ಹಾಗೇ ಇರಲಿ, ಡ್ರಾಯರಿಗೆ ಭೂಷಣ ಮತ್ತು ಮಂಗಳಕರ. ಬೆಳ್ಳಿ ಕಟ್ಟು ಹಾಕಿದ ನಶ್ಯದ ಡಬ್ಬಿ ಒಂದು ಕಳೆದು ಹೋಗಿದೆ. ಆ ಡ್ರಾಯರಿನಲ್ಲಿ ಏನಾದರೂ ಇದೆಯೇ ನೋಡು ಇದ್ದರೆ ಕಳಿಸು.

ಇಂತಿ ಆಶೀರ್ವಾದಗಳು,

ಕು. ರಾಮಯ್ಯ.

* * *

ಶ್ರೀ|| ನಮಸ್ಕಾರಗಳು,

ನಶ್ಯದ ಡಬ್ಬಿ ಸಿಕ್ಕಿತು, ಆದರೆ ಡ್ರಾಯರಿನಲ್ಲಿರಲಿಲ್ಲ "ಅರ್ಜೆಂಟ್" ಅಂತ ಗುರುತು ಇದೆಯಲ್ಲಾ ! ಆ ಫೈಲಿನ ಮೇಲೆ ಇತ್ತು. ಆದರೆ ಧೂಳು ಮುಚ್ಚಿದ್ದರಿಂದ ಎಲ್ಲರೂ ಅದನ್ನು ಪೇಪರ್ ವೈಟ್ ಎಂದೇ ಅಂದುಕೊಂಡಿದ್ದಿರಬೇಕು. ನೀವು ಬರೆದರಲ್ಲಾ ಅಂತ ನಾನು ಹುಡುಕಿದೆ. ಹಾಗಾಗಿ ನನಗೆ ಗೋಚರವಾಯಿತು.

ಇವತ್ತು ಒಂದು ಕಾಗದದಲ್ಲಿ "ದಸವೋ" ರೀತ್ಯಾ ನಾಲ್ಕು ಪತ್ರಗಳು ಬರಬೇಕಾಗಿತ್ತು ಅಂತ ಸಾಹೇಬರು ಬರೆದಿದ್ದರು. "ದಸವೋ" ಎಂದರೆ ಅರ್ಥವಾಗಲಿಲ್ಲ, ಅವರನ್ನೇ ಹೋಗಿ ಕೇಳಿದೆ, "ಇಷ್ಟೂ ಗೊತ್ತಿಲ್ಲವೇ" ಅಂತ ರೇಗಿಬಿಟ್ಟರು. "ದಸವೋ" ರೀತಿ ನಿಮ್ಮ ಕಾಲದಲ್ಲಿ ಇತ್ತೆ ? ಹಾಗೆಂದರೇನು ನಿಮಗೆ ಗೊತ್ತೆ ? ಗೊತ್ತಿದ್ದರೆ ಬರೆಯುತ್ತೀರಾ.

ತುಂಬಾ ತುರ್ತು ಕೆಲಸವಿರುವುದರಿಂದ ಹೆಚ್ಚಿಗೆ ಬರೆಯಲು ಅಶಕ್ತ.

ಇಂತಿ ನಮಸ್ಕಾರಗಳು,

ಕು. ರಾ. ಸಂಚ್ಚಿಗಯ್ಯ.

* * *

ಪ್ರಿಯ ಕುಮಾರ !

ಇಂದು ನಾನು ಧನ್ಯ. ಏಕೆಂದರೆ ಆ "ದಸವೊ" ರೀತಿಗೆ ನಾನೇ ಕರ್ತೃ ನಾನೇ ಪಿತೃ.

ಹಿಂದೊಮ್ಮೆ ನಾನು ವಯಸ್ಸಿನ ಹುಮ್ಮಸ್ಸಿನಲ್ಲಿದ್ದಾಗ ಕಛೇರಿಯಲ್ಲಿ ಏನೇನೋ ಕೆಲಸಗಳನ್ನೂ ಮಾಡಬಯಸಿದೆ. ಕಛೇರಿ ಕೆಲಸವನ್ನೂ ತ್ವರಿತ ಗೊಳಿಸಿದೆ. ಬಂದ ಕಾಗದಗಳನ್ನೂ ಬೇಗ ಬೇಗ ರವಾನಿಸಹತ್ತಿದೆ. ನನ್ನ ಸುತ್ತಲೂ ಇದ್ದವರನ್ನೂ ಕಡೆಗೆ ಅಧಿಕಾರಿಗಳನ್ನೂ ಚುರುಕು ಗೊಳಿಸಿದೆ. ಆಗ ಅವರೆಲ್ಲರೂ ಒಟ್ಟಿಗೇ ನನ್ನ ಮೇಲೆ ಬಿದ್ದು ಹೀಗೆ ನೀನು ಮಾಡಹತ್ತಿದರೆ ಕೊಪ್ಪಕ್ಕೆ ವರ್ಗ ಮಾಡಿಸುತ್ತೇವೆ. ಈ ಕಛೇರಿಯ ವಾತಾವರಣಕ್ಕೆ ಸರಿಹೊಂದಿ ಕೊಂಡು ಸಾವಧಾನವಾಗಿ ಕೆಲಸ ಮಾಡು ಇಲ್ಲವಾದರೆ ವರ್ಗ ಎಂದರು. ಆಗೊಬ್ಬ ಮುದಿ ನೌಕರ ನನಗೆ ಬುದ್ಧಿವಾದ ಹೇಳಿದ, "ಅಯ್ಯಾ! ಮಗು ನಿನಗೆ ಕೆಲಸ ಬೇಗ ಮಾಡುವ ಕೆಟ್ಟ ಚಾಳಿ, ಬೇಗ ಹೋಗುತ್ತದೆಯೇ ? ಕಛೇರಿ ಕೆಲಸ ಯಥಾ ಸಾವಕಾಶ ನಡೆಯಲೂ, ನಿನ್ನ ಛಟ ತೀರಿಸಿಕೊಳ್ಳಲೂ ಒಂದು ಉಪಾಯ ಹೇಳುತ್ತೇನೆ ಕೇಳು. ಯಾವುದಾದರೂ ಇಲ್ಲದೇ ಇರುವ ವಿಷಯ ವನ್ನು ತೆಗೆದುಕೊಂಡು ಒಂದು ಮೋಸದ ಫೈಲು ತಯಾರು ಮಾಡು. ನಿನ್ನ ಕಾರ್ಯದ ಛಟವನ್ನೆಲ್ಲಾ ಅದರ ಮೇಲೆ ತೀರಿಸು. ಯಾರಿಗೂ ಆ ವಿಷಯ ತಿಳಿಯದು. ಯಾರೂ ತಿಳಿಯದು ಅಂತ ಹೇಳಿಕೊಳ್ಳುವುದಿಲ್ಲ. ಹೀಗಾಗಿ ಜಬರ್ದಸ್ತೀಲಿ ಕಾಲ ಕಳೆಯಬಹುದು " ಅಂತ.

ಮುದುಕರ ಬುದ್ಧಿವಾದ ಹಿತವಾಗಿತ್ತು. ಮೋಸದ ಫೈಲು ಅದಕ್ಕೇ "ದಸಮೋ" ಫೈಲು ಅಂತ ಪ್ರಾರಂಭ ಮಾಡಿದೆ. "ದಸಮೋ" ರೀತಿಯಾಗಿ ಈ ಫೈಲು ಹೀಗಾಗಬೇಕಾಗಿತ್ತು. ಈ ಹುಕುಂ ಹೀಗೆ ಹೊರಡಬೇಕು ಎಂದು ಶುರು ಮಾಡಿದೆ. ಕಡೆ ಕಡೆಗೆ ಎಲ್ಲಾ ಕಛೇರಿಗಳಲ್ಲೂ ಪ್ರತಿನಿಧಿ ಸಭೆಗಳಲ್ಲೂ, ಕಡೆಗೆ ಮಂತ್ರಿ ಮಂಡಲದಲ್ಲೂ ಕೂಡ ದಸಮೋ ರೀತಿಯ ಸ್ಪಷ್ಟೀಕರಣಕ್ಕೆ ನಾನೇ ಆಹ್ವಾನಿಸಲ್ಪಡುತ್ತಿದ್ದೆ. ಅದರ ಮರ್ಮ ಇಷ್ಟೇ. ಇದನ್ನು ನೀನೂ ಕುಲದೇವರಂತೆ ಮರ್ಯಾದೆಯಿಂದ ಕಾಪಾಡಿಕೊಂಡು ಬಾ.,

ನನಗೂ ವಯಸ್ಸಾಯಿತು. ಮನಸ್ಸು ಚಪಲಸ್ಥಿತಿಯಲ್ಲಿದೆ ಆದರೂ ಒಂದು ದಿನ ನನ್ನ ಮೊಮ್ಮಗನು ನಿನ್ನನ್ನೋ ಅಥವಾ ನನ್ನನ್ನೋ ಈರೀತಿ " ದಸಮೋ " ರೀತಿ ಏನು ಎಂದು ಕೇಳಲಿ ಎಂದೇ ನನ್ನ ಹಿರಿಯಾಶೆ.

ಇಷ್ಟು ಪ್ರವರ್ಧಮಾನಕ್ಕೆ ಬಂದ ನಿನಗೆ ಇನ್ನು ಮೇಲೆ ನಾನೇನೂ ಬುದ್ಧಿ ಹೇಳಬಯಸುವುದಿಲ್ಲ. ಬುದ್ಧಿ ಹೇಳುವ ಕಾರಣವೂ ಇಲ್ಲ. ನಿನ್ನ ಮುಂಬರು ವನ್ನೇ ಎದುರು ನೋಡುತ್ತಿರುವ.

ನಿನ್ನ ಮತ್ತು ದಸಮೋ ಪಿತೃ,

ಕು. ರಾಮಯ್ಯ.

# ಸಮಾಜ ಸೇವೆ

"ಸೊರಗಿದೀರಿ ಯಾಕ್ರೀ, ಸಿದ್ದಕ್ಕಾ? ಸಕ್ರೆ ಸಿಕ್ಲಿಲ್ವೋ, 'ಸಿದ್ಧಾಪತಿ' ಸಿಕ್ಕೊಳ್ಳೀ, ಸೀರೆ ಬಣ್ಣಾ ಹೋಯ್ತೋ, ಇಲ್ಲಾ........ನಿಮ್ಮ ಸೊಸೈಟೀ........?"

"ಅದೇ ಕಣ್ರಿ, ಅದೇ! ಸರಿಯಾಗಿ ಕಂಡ್ಹಿಡಿದ್ರಿ!........ಅಲ್ರೀ, ಈ ಸ್ತ್ರೀ ಸಹಕಾರ ಸೊಸೈಟೀಗೆ ಸೆಕ್ರೆಟರಿ ಆಗಿ, ಸೀಗೇ ನೀರು ಕುಡೀತಿದೀನ್ರೀ!"

"ಹಯ್ಯೋ, ಹಯ್ಯೋ, ಹಾಗಂದ್ರೇನ್ರೀ?"

"ಅಲ್ರೀ! ಈ ಸುಮ್ತುಮ್ಮ, ಸುಸೀಲಾಬಾಯಿ, ಸೂರಕ್ಕ ಎಲ್ಲಾ ಸೇರ್ಕೊಂಡು, ನನ್ನಿಕ್ಹಾಕ್ಬಿಟ್ರು ಈ ಸೆಕ್ರೆಟರಿ ಕೆಲ್ಸಕ್ಕೆ! ನಾನೂ........ಏನೋ........ ಹೀಗೇ ಖಾದೀ ಸೀರೆ ಉಟ್ಟು, ಕಾರ್ಯರಂಗಕ್ಕಿಳಿದ್ರೆ, ಕಾರ್ಯದರ್ಶಿ, ಕಮಿಟಿ ಮೆಂಬ್ರು, ಕಸ್ತೂರಿಬಾ ಕೇಂದ್ರ, ಕಾರ್ಪೊರೇಷನ್ನು ಅಂತ ಹತ್ತಿ, ಕೊನೇಗೆ ಕ್ಯಾಬಿನೆಟ್‌ಗೂ ಕಾಲಿಟ್ಟೇನೋ ಕಾಮಿನಿಯರ್ಗೊಂದು ಸ್ಥಾನ ಕಾದಿಟ್ಟಾಗ, ಅಂತ ಒಳಗೇ ಆಸೆ ಇಟ್ಕೊಂಡು ಕೈ ಹಾಕ್ದೆ!........ಕಾಲ್ಕೊಡ್ತು!"

"ಹಾ! ಹಾ! ಅಂಥಾದ್ದೇನಾಯಿತ್ರೀ? ತ್ಸುತ್ಸುತ್ಸುತ್ಸು?"

"ಅಲ್ರೀ! ಬೇಲಿ ಎದ್ದು ಹೊಲಾ ಮೇಯ್ದಾಂಗೆ, ಬೆಲ್ಲದ್ಭರಣೀಗ್‌ಗೊದ್ದಾ ಬಿಟ್ಹಾಗೆ, ಬಕಾಯ ಸ್ವಾಹ ಅಂತ ಎಲ್ಲಾ ತಾವೇ ಭಕ್ಷಿಸ್ತಾ ಹೋದ್ರೆ, ಬದ್ಕೋ ಬಗೇ ಹೇಗ್ರೀ ನಾನು?........ಬಟ್ಟೇ ಡಿಪಾರ್ಟ್‌ಮೆಂಟ್‌ಗೆ ಭಾಮಾಬಾಯಿನ ಗೊತ್ಮಾಡಿದ್ದೆ; ಬೆಣ್ಣೆ ಬಾಬ್ತಿಗೆ ಕಣ್ಣಮ್ಮನ್ಹಾಕ್ದೆ; ಬಳೆ ರಿಬ್ಬನ್ ಭಾಗಕ್ಕೆ ಕಳಾವತೀ ಕಾವ್ಲು;... ....ತಿಂಗಳ್ಕೊನೇಲಿ ಲೆಕ್ಕ ನೋಡಿದ್ರೆ ಇವತ್ತು, ಬಟ್ಟೇ ಬಾಬ್ತಿನಲ್ಲಿ ಬಿಲ್ಲುಗಳೇ ಶೂನ್ಯ, ಬೆಣ್ಣೆ ನಾಲ್ಕು ವೀಸೆ ನಮೋ ನಮಃ, ಬಳೇ ಸುರುಳಿ ಮೂರು ಮಾಯ! ಏನ್ರೀ ಇದು ಅಂದ್ರೆ, ನಿಮ್ದೇಪೇ ದೊಡ್ಡು ಅಂತಾಳೆ ಭಾಮಾಬಾಯಿ, ಬೆಣ್ಣೇಲಿ ನೀರು ಭಾಳ ಅಂತಾಳೆ ಕಣ್ಣಮ್ಮ, ಬಳೇ ಬರೇ ವಡ್ಕೊಂತ ಬೊಂಕ್ತಾಳೆ ಕಳಾವತಿ!.......ಕಣ್ಣಮ್ಮನ್ಮನೇಲಿ ನಿತ್ಯ ಬೆಣ್ಣೆ ಮುರ್ಕು ಬೊಂಬಾಯಿ ಪಾಕು, ಬಾಲೂಷಾ; ಕಳಾವತಿ ಅಜ್ಜೀ ಕೈಲೂ ವೈಜಯಂತೀ ಮಾಲಾಬಳೆ, ನರ್ಗೀಸ್ ಚಕ್ರೀ ಸಾಣೆ! ಭಾಮಾಬಾಯ್ಮನೇಲಂತೂ ಬ್ಲೌಜು ಗಳು ಹೊಲ್ಸಿದ್ದೂ ಹೊಲ್ಸಿದ್ದೇ!........ಸಾಹೇಬ್ರಿಗೆ ಸಾರ್ಕ್ಲೋಂತ ಸೊಟ್ಟ ಕಣ್ಣು ಮಿಟಕ್ಸಿ ಹೋದ್ಳು ಸೊಸೈಟಿ ಇನ್ಸ್‌ಪೆಕ್ಟ್ರು ಸಹಮರ್ಮಿಣಿ ಇವತ್ತಾಗ್ಲೇ! ಹಾಳ್."

"ಛೀ ಛೀ! ಶಾಂತಂ ಶಾಪಂ! ಶಾಂತಂ ಶಾಪಂ!"

"ನಾನಿನ್ಮಾನವಾಗಿ ನಾಲಕ್ಜನದೆದ್ರೂಗೆ ನಡೆಯೋ ಹಾಗಿಲ್ರೀ! ನನಗಿನ್ನೇನ್ರೀ ಗತಿ? ಹಗ್ಗವೇ, ಹಾಲಾಹಲವೇ, ಹಾರ್ನಿಲ್ಲದ ಲಾರೀ ಬುಡವೇ?...."

"ಅಯ್ಯೋ ಅಯ್ಯೋ! ಅಷ್ಟಕ್ಕೇ ಅದರ್ಲ್ಹೋದ್ರೆ ಹೇಗ್ರೀ, ಸಮಾಜ ಸೇವೆ, ಸೋದರೀ ಸೇವೆ, ಸ್ವಾರ್ಥ ಸೇವೆ ಸಾಗೋದು?........ಅಲ್ಲಾ,....... ನೀವೇನು ಕಂಡೋರ್ರ್ಮಸನ್ನ ಕಂಕ್ಳಲ್ಲಿಟ್ಟಿದೀರಾ, ಅಡ್ಗೆಯೋಳೂಂತ ಕೂಗಿಸ್ಕೊಂಡಿದೀರಾ, ಪುರುಷಾಂವ್ಳಗ ಅನ್ನಿಸ್ಕೊಂಡು ಪೆಚ್ಚಿಂದಿದೀರಾ ಸಮಾಜ ಸೇವೇಲಿ?........"

"ಆ! ಆ! ಹಾಗಂದ್ರೆ?"

"ಹಾಗಂದ್ರೇ?... ....ಹೇಳ್ತೀನ್ಕೇಳಿ........ನಾನೂ ಸಮಾಜ ಸೇವೇಲಿ ಸವೆದಿರೋಳು ತಾನೇ!........ಅಕ್ಕಾ ಪಟ್ಣದಲ್ಲಿ ಇವ್ರು ಇಂದಾ—ಗೆ ಗುಮಾಸ್ತೆ ಆಗಿದ್ದಾಗಿನ್ಮಾತು. ಅಲ್ಲೊಂದ್ಸಮಾಜ ಸ್ಥಾಪಿಸ್ಬೇಕೂಂತ ಹೊರಟೆ. ಅಮಿಲ್ದಾರಿಣಿ ಆಟೊಮ್ಯಾಟಿಕ್ ಆಗಿ ಅಧ್ಯಕ್ಷಿಣಿ, ನಾನು ಸೆಕ್ರೆಟರಿ, ಸ್ಥಳದೋರ್ನ ಸದಸ್ಯರಾಗಿ ಸೇರ್ಸ್ಸಿ ಅಂತ ಆಜ್ಞೆ ಆಯ್ತು ಅಧ್ಯಕ್ಷಿಣೀದು!........ಒಂದ್ಸಾರೇ ಆಕೇ ಮನಸ್ಸಿರಗ್ಸಕ್ಕೆ ಅವಳ್ಹುಕ್ಕೀ ರೋಗದ್ಮಗೂನ ಮೂರ್ಗಂಟೇ ಹೊತ್ತು ಸುದಾರಿಸ್ದೆ; ಇನ್ನೊಂದ್ಸಾರೇ ಮಹರಾಯ, ನನ್ಹೀಡ್ತೀನ ಸಮಾಜಕ್ಕೆ ಕಳ್ಸಿದ್ರೆ, ಸಂಜೆ ಹೊತ್ತು ನೀಬಂದು ಅಡ್ಗೆ ಬೇಸ್ತೀಯಾ ಅಂತ ಕೇಳ್ದ! ಮತ್ತೊಂದ್ಸಾರೇಲಿ,— ಸಮರಸ್ಪಷ್ಟಿ ಸಾಹುಕಾರ ಆತ. ತೊಗರೀ ಹೊಟ್ನಲ್ಲೇ ತಲತಲಾಂತರಕ್ಕೂ ತಡೆಯೋ ಆಸ್ತಿ ಮಾಡಿದ್ದ—ಗುಮಾಸ್ತೆ, ಗೂಢಚಾರ್ರು, ಘೂರ್ಕಾ ಎಲ್ಲಾ ಪಾಂಗಿತ!........ಗುಮಾಸ್ತೆ ಅಮ್ಮಾವ್ರಿಗೆ ನನ್ನ ಶಾಸ್ತ್ರೋಕ್ತವಾಗಿ 'ಮಿಸೆಸ್ ಮುಕ್ಕಣ್ಣ' ಅಂತ ಪರಿಚಯ ಮಾಡ್ಕೊಟ್ಟ. ಪಾಪ! ಆಕೆ ತೊಗರೀ ವಡೀತಿದ್ದ ತರಳೆ. ತಪ್ಪಿಂಗ್ಲೀಷ್ನೂ ಅರೀಳು. 'ಬನ್ನಿ ಮುಕ್ಕಣ್ಣ' ಅಂತ ಬಾಯ್ತುಂಬ ಕರೆದ್ಕೂರ್ಸಿದಳು. ಮಕ್ಳು ಮರಿ ಎಲ್ಲ ಕಕ್ಕಾಬಿಕ್ಕಿಯಾಗಿ ನನ್ಮುಖ ನೋಡುಕ್ಕೆ ಮುತ್ಕೊಂಡ್ವು, ಇದ್ಯಾವಳು ಈ ಪುರುಷನಾಮೀ ಅಂತ!........"

"ಅಂದ್ಮೇಲೆ....... ನೀವೂನೂ........?"

"ಅಯ್ಯೋ ಅಷ್ಟೇನೇ! ಬಟ್ಟೆ ಎಷ್ಟು ಬಿಟ್ಟೆ ಹೊಲ್ದಿದೀನೋ, ಎಷ್ಟ್ ಮನೇ ರಂಗೋಲೀಗೆ ರಂಗು ಹಾಕ್ಕೊಟ್ಟಿದೀನೋ, ಎಷ್ಟು ಪಟ ಹೆಣ್ದು, ಕಂಡೋರ ಹೆಸರ್ನ ಕೈಯಾರ ಅಂಟ್ಸಿ ಕಲಾ ಪ್ರದರ್ಶನಕ್ಕೆ ಕಳಿಸಿದೀನೋ, ಕೊನೇಗೆ ಕಾರು ಕೂಡ ತಳ್ಳಿದೀನಿ ಕಾಲಕ್ಕೆ ಸರಿಯಾಗಿ ಕರ್ಕೊಂಡ್ಹೋಗೋಕ್ಕೆ ಅಧ್ಯಕ್ಷರ್ನ. ಯಾವ್ದೋ. ಸಮಾರಂಭದಲ್ಲಿ!.. ... ಹಾಗೆಲ್ಲಾ ದುಡೀದೇ ಇದ್ರೆ... . ಸೇಲ್ಸ್ ಟ್ಯಾಕ್ಸ್ ಡಿಪಾರ್ಟ್‌ಮೆಂಟಿಗೆ ವರ್ಗವಾಗ್ತಿತ್ತೇ ನಮ್ಮೆಜಮಾನ್ರಿಗೆ ಈ ಊರ್ಗೇ, ನಾನೂ ಒಂದು ಕೌನ್ಸಿಲ್ ಮೆಂಬ್ರೂಂತ ಕಾಣ್ತಿದ್ನೇ........?"

"ನುರಿತೋರು, ನೀವೇ ನನ್ಮಾನ ನಿಲ್ಲೋ ಮಾರ್ಗ 'ನೋಡಿಸ್ಬೇಕ್ರೇ!"

"ಆ,........ಇರಿ!........ಆಕೆ........ಆ ಇನ್ಸ್ಪೆಕ್ಟ್ರು 'ಕುಟುಂಬ' ಏನಾದ್ರೂ

ಏನಾದ್ರೂ ಬಿಟ್ಹೋಗಿದಾಳೋ ನಿಮ್ಮ ಸೊಸೈಟೀಲಿ?........ಕಾಗದ್ವೋ........ ಕರ್ಚೀಫೋ .......ಕೈಚೀಲ್ವೋ ..... ಏನಾದ್ರೂ........?"

ಹಾ! ಹೌದ್ರೀ! ತಳಾ ಕಟ್ಸುಕ್ಕೇಂತ ತೆಗೆದ್ಕೊಂಡು ಹೋಗ್ತಿದ್ದ ತಪ್ಲೇನ ಅಲ್ಲೇ ಮರ್ತು ಹೋದ್ಳು ನನ್ನ ಘಬರಾಯ್ಸೋ ಗದ್ದಲದಲ್ಲಿ! ಎತ್ತಿರ್ಸಿದೀನಿ!"

"ಆ! ನೋಡಿದ್ರಾ!. ... ಆ ತಪ್ಲೇಗೆ ತುಪ್ಪ ತುರ್ಕಿ ತುರ್ತಾಗಿ ತಲಪಿಸ್ಬಿಡಿ. ನಿಮ್ತಕ್ಕೀಗೆ ತಲೆಭಾರವೋ ತಳಭಾರವೋ ತಯಾರಿಸ್ಕೊಡ್ತೀನಿ ನಮ್ಮೆಜಮಾನ್ರಿಂದ—ಆ ತುಪ್ಪದ್ತೂಕ ತಕರಾರೇನೂ ಬರದೆ, ತಿಂಗಳ್ಕೊನೇಲಿ ಲೆಕ್ಕ ಸರಿಯಾಗಿರೋ ಹಾಗೆ!........ಆ... ....!"

"ಆ .......ಹಾಗಾದ್ರೆ .......ಮೊಕದ್ದಮೇ........ಮಾನ ನಷ್ಟ........ಮಲ್ಲೇಶ್ವರದ್ಕೆರೆ ... ..."

"ತ್ಸು ತ್ಸು ತ್ಸು ತ್ಸು!........ಬಿಡ್ತೂನ್ನಿ!........ಅಂಥಾ ಮಾತೆಲ್ಲಾ ಸಾಕು! ........ಸಾಗ್ಲಿ ಸುಸೂತ್ರವಾಗಿ ಸಮಾಜ ಸೇವೆ!"

—ಟಿ. ಸುನಂದಮ್ಮ.

—o—




ಅರೆ! ಅಂಚೆ ಜವಾನನ ಕೈ—ಖಾಲಿಯಾದರೂ ಹಾಗೇ ಹಿಗಿಲಿಸಿಕೊಂಡೇ ಇದೆಯಲ್ಲಾ!

# ಕುಹೂ ಗುಹೂ

---

ಕೋಗಿಲೇ, ಕೋಗಿಲೇ, ಬಲು ಜಾಣ ಕೋಗಿಲೇ
ಕವಿ ಕಂಡ ಕೋಗಿಲೇ, ಬಲು ಭಂಡ ಕೋಗಿಲೇ !
ಮನೆ ಮನೆ ಹುಡುಕಿ ತಿರುಗಿ
ನನ್ನ ಹಾಗೆ ಕಾಲು ಸೊರಗಿ
ಅನ್ನ ವಿಲ್ದೆ ನಿತ್ಯರೋತಿ
ಬೆಪ್ಪ ಮೋರೆ ಸಪ್ಪೆ ಮೂತಿ
ರಸ್ತೆ ಮೂಲೆ, ವೃಕ್ಷ ಮೂಲೆ
ಎಲ್ಲೋ ಗಲ್ಲಿ, ಅನಾನ್ಕೂಲ
ಕೋಗಿಲೇ, ಕೋಗಿಲೇ, ಬಲು ಜಾಣ ಕೋಗಿಲೇ
ಕವಿ ಕಂಡ ಕೋಗಿಲೇ, ನಿನಗಿಲ್ಲ ಕೋಗಿಲೇ
ಹಾವು ಹುತ್ತ—ಅದೇ ರೀತಿ
ಮಲಾನಂತೆ ನಿನ್ನ ನೀತಿ
ಬಡವ ಕರಿಯ ಬೆವರನಿಳಿಸಿ
ಮನೆಯು ಕಟ್ಟಿ ಕಡವಗಳಿಸಿ
ಪಾದಶಾಹಿ ಮೆರೆಯುವೆ
ಅದರ ಗುಟುಕ ಕದಿಯುವೆ
ಕೋಗಿಲೇ ಕೋಗಿಲೇ, ಬಲು ಜಾಣ ಕೋಗಿಲೇ
ಕವಿ ಕಂಡ ಕೋಗಿಲೇ, ಕುಹೂ ಕೂಗು ಕೋಗಿಲೇ
ಕಾಗೆ ಕೂಡ ಕಾಗೆಯಾಗಿ
ಬಹಳ ದಿನಗಳುಳಿವುದೆ ?
ನಿನ್ನ ಕುಹೂ ಗುಹೂ ಎಂಬ
ತನ್ನ ತನವು ಮೊಳೆತಿದೆ
ಕಾಗೆ ಮೂಗ ಕಬಳ ಕಾಯೆ
ನಿನ್ನ ನಾಶ ಖಂಡಿತಾ....
ಕೋಗಿಲೇ ಕೋಗಿಲೇ. ಬಲು ಜಾಣ ಕೋಗಿಲೇ
ಜಾಣತನನೆ ಮಾರಣ, ಜವರಾಯ ಬರಲು ಕಾರಣ.

—ಗಂಗಾಧರ.

---

# ಎಂಜಿನೆಂಜಿಲು

ಅಯ್ಯೋ! ಗಾಳಿ ತೂರಿ ತಂದು ಕಣ್ಣಿಗೆರಚಿತು
ಆಹ! ಕಿಡಿಯು ಹಾರಿ ಬಂದು ನುಣ್ಣಗಿರುಕಿತು.
ಅಬ್ಬ! ಏನು ನೋವು! ಸುಟ್ಟ ಕೆಂಡವೇ ಇದು!
ಉಹು! ಕಣ್ಣ ಸುಣ್ಣ, ಹಾಳು, ಬೆಂಕಿಯೇ ಇದು!
ಅವನು, ಇವನು, ಅಕ್ಕ ಪಕ್ಕ—ಸರಿದು ಧಾವಿಸಿ
ಇದೇ ಸಮಯ ದಯೆಯ ತೋರೆ ಲಗ್ನ, ಭಾವಿಸಿ
ಹಳೆಯ ಬಳೆಯ ಕೊಳೆಯ ಕೈಯ ತುಡುಕಿ ವೇಗದಿ
ರೆಪ್ಪೆ ಎರಡ ಮೇಲೆ ಕೆಳಕೆ ಮಡಿಚಿ ನಿಮಿಷದಿ
ಗಾಳಿ ಊದಿ ನೀರ ತುಂಬಿ ಬಟ್ಟೆ ಸೋಕಿಸಿ
ಎಳೆದು ತಿಕ್ಕಿ ನುಲಿಚಿ ಉಜ್ಜಿ ಸಾಕು ಸಾಕಿಸಿ
ವೈದ್ಯನೊಬ್ಬ ಹಿಂಡೆ ಕಣ್ಣೆ ಉರಿವ ಅಂಜನ
ಮಿತ್ರ ಶತ್ರು ತಿಕ್ಕೆ ತೀಡೆ ಸಿಕತ ಭಂಜನ
ಕಣ್ಣು ಪಾಪ ಮರಳ ಹರಳಿಗಗ್ನಿ ಪರ್ವತ
ಸಣ್ಣಗುಡ್ಡೆ ಮೆಣಸು ಗುಡ್ಡವಾಗೆ ಗರ್ವಿತ
ಕೊಂಚ ಹೊತ್ತು ಅತ್ತು ಕರೆದು ಗೋಳನಾಡಲು
ಮಾಯವಾಗೆ ಇದ್ದ ತಾಪ, ಶಾಂತಿ ನೀಡಲು—
ಮತ್ತೆ ಲೋಕ ರಸಮಯ! ಸುಲಭ ಸುಖಮಯ!
ಎತ್ತನೋಡಲತ್ತ ಬಣ್ಣ! ಹಾ! ನಿರಾಮಯ!

ಪಾಟೂಳಿ. —



# ಡಬ್ಬಲ್ ಛಾರ್ಜು

ನಮ್ಮ ಕಿಟ್ಟಿಗೆ ಆಗಾಗ್ಗೆ ನಾನು ಹೇಳುತ್ತಲೇ ಇದ್ದೆ, "ಬೇಡವೋ, ಹಾಗೆ ಟಿಕೇಟಿಲ್ದೆ ರೈಲಿನಲ್ಲಿ ತಿರುಗಬಾರ್ದು. ಸರಕಾರಕ್ಕೂ ದ್ರೋಹ, ಮತ್ತೆ ಎಲ್ಲಾದ್ರೂ ಸಿಕ್ಕಿದ್ರೆ ನಿನಗೂ ಹಜಾಮತಿ, ಅವಮಾನ" ಎಂದು. ಆದರೆ ಅವನು ಕೇಳಬೇಕೇ? ನೋಡೋದಕ್ಕೆ ಪಕ್ಕಾ. ಸಭ್ಯ ಗೃಹಸ್ಥನ ಹಾಗೇ ಕಾಣೋನು, ಸ್ವಲ್ಪ ಬಾಯಿ ಮುಂದು. ದಬಾವಣೆಯಲ್ಲೇ ಈ ವರೆಗೂ ತಳ್ಳಿಕೊಳ್ಳುತ್ತಾ ಬಂದಿದ್ದ. ತಾ ಸಿಕ್ಕಿಕೊಂಡ ಸಂದರ್ಭಗಳನ್ನೂ ಮತ್ತು ಬಿಡಿಸಿಕೊಂಡು ಬಂದ ಚಾಣಾಕ್ಷತೆಯನ್ನೂ ರಸವತ್ತಾಗಿ ವರ್ಣಿಸುತ್ತಿದ್ದ. ಸಹಜವಾಗಿ ತಾನು ಸಿಕ್ಕುವ ಹಾಗೇ ಇಲ್ಲವೆಂದು ಅವನ ನಂಬಿಕೆ. "ಸಿಕ್ಕಿದರೆ ಏನು ಮಾಡ್ತೀ" ಎಂದು ನಾ ಕೇಳಿದರೆ, ಅವನು 'ಅದ್ಹೇಗೋ ಸಿಕ್ಕೋದು? ಹಾಸನದ ಸ್ಟೇಷನ್ನಲ್ಲಿ ಪ್ಲಾಟ್ ಫಾರಂ ಟಿಕಿಟ್ಟೇನೂ ಇಲ್ಲ. ರೈಲಿಳಿದು ಸ್ವಲ್ಪ ಹೊತ್ತು ಹಾಗೂ ಹೀಗೂ ಅಡ್ಡಾಡುತ್ತಾ ಇದ್ದು ಕೈ ಬೀಸಿಕೊಂಡು ನೇರವಾಗಿ ಹೊರಗೆ ಬಂದುಬಿಟ್ರೆ ಆಯ್ತು. ಅಲ್ದೆ ಸ್ಟೇಷನ್ನಲ್ಲಿರೋನು ನಮ್ಮ ನಾಣಿ. ಮತ್ತೊಬ್ಬ ನಮ್ಮ ಸಂಬಂಧಿಯೇ ಆಗಬೇಕು. ನಮ್ಮ ಚಿಕ್ಕಮ್ಮನ ಅತ್ತೆಯ ತಮ್ಮನ ಮೊಮ್ಮಗಳನ್ನೇ ಅವನಿಗೆ ಕೊಟ್ಟಿರೋದು" ಎಂದು ವಿವಿಧ ವಿಧಾನಗಳ ಕಂತೆಯನ್ನೇ ಬಿಚ್ಚಿ ಇಡುತ್ತಿದ್ದ. ಇಲ್ಲಿಂತೂ ಸರಿ. ಬೆಂಗಳೂರಿಗೆ ಇಷ್ಟು ಸಾರಿ ತಿರುಗ್ತಾನೆ, ಎಲ್ಲಾದರೂ ಸಿಕ್ಕಿದರೆ ಏನು ಗತಿ ಎಂದು ನನಗೆ ಯೋಚ್ನೆ. ಆದರೆ ಆ ಮಹಾರಾಯನಿಗೆ ಏನೂ ಚಿಂತೆಯೇ ಇರಲಿಲ್ಲ. ಒಂದೊಂದೂರಲ್ಲಿ ಒಂದೊಂದು ಉಪಾಯ ಕಂಡು ಹಿಡುಕೊಂಡಿದ್ದ.

ಮೊನ್ನೆ ನಾಳೆ ಬರುವೆನೆಂದು ಹೇಳಿ ಬೆಂಗಳೂರಿಗೆ ಹೋದವನು ನಾಲ್ಕು ದಿನಗಳಾದ ಮೇಲೆ ಬಂದ. ಕಿಟ್ಟಿ ಜೊತೆಯಲ್ಲಿ ಹೋಗಿದ್ದ ಗೋವಿಂದ ಅವನನ್ನು ಗೇಲಿ ಮಾಡುವುದನ್ನು ಕಂಡು ಏನೋ ವಿಶೇಷವಿರಬೇಕೆಂದು ನನಗನಿಸಿತು. "ಏನಾಯ್ತೋ ಮುಂಡೇದೆ. ನಾ ಬೇಡ ಅಂದರೆ ಕೇಳ್ತೀಯ" ಎಂದು ಪ್ರಾರಂಭಿಸಿದೆ.

ಕಿಟ್ಟಿ ರೇಗಿ, "ಏನೋ ಆಗೋದು? ನನ್ನ ತಂಟೆಗೆ ಯಾವನೋ ಬರೋನು?" ಎಂದು ರೇಗಾಡಿದ.

"ಸರಿ, ನಿನ್ನ ತಂಟೆಗೆ ಯಾರೂ ಬರೊಲ್ಲ. ಆದರೆ ಗೋವಿಂದನ ನಗುವಿಗೆ ಕಾರಣ ಇಲ್ಲ ಅನ್ನು ಹಾಗಾದರೆ?" ಎಂದೆ.

"ಅವನು ಅಯೋಗ್ಯ. ಹುಡುಗು ಮುಂಡೇದು" ಎಂದು ಅವನ ಮೇಲೂ ರೇಗಿದ.

ಏನೋ ಸಮಾಚಾರವಿದೆ ಎಂದುಕೊಂಡೆ. "ಆದದ್ದಾದರೂ ಏನು ಹೇಳು. ನೀನೇ ಗೆದ್ದೆ ಎಂದು ಈಗಲೇ ಒಪ್ಪುತ್ತೇನೆ."

"ಆಗೋದೇನು ಮಹಾ. ತುಮಕೂರು ಹತ್ತಿರಕ್ಕೆ ಬಂದೆವು. ಥ್ರೂ ಗಾಡೀಲೇ ಮಲಗಿದ್ದೆ. ಯಾವನೋ ಬಂದು 'ಟಕ್ ಟಕ್' ಎಂದು ಬಡಿದು 'ನಾನ್ ಸಾರ್' ಎಂದು ವದರಿಕೊಂಡ. ನನಗೊ ಅರ್ಧ ನಿದ್ದೆ, ಅರ್ಧ ಎಚ್ಚರ."

"ಪಾಪ, ಪಾಪ"

"ನಿದ್ದೆ ಕೆಡಿಸಿದ್ನಲ್ಲಾ ಅಂತ ಸಿಟ್ಟು ಬೇರೆ. ಎದ್ದು ಚೆನ್ನಾಗಿ ದಬಾಯಿಸಿ ಬಿಟ್ಟೆ ಅವನ್ನ."

"ಅಲ್ವೇ! ಪರವಾಗಿಲ್ಲ. ಹಾಗೆ ದಬಾವಣೆಲೇ ಕಾಲ ಹಾಕಿದ್ದಿ! ಆಮೇಲೆ?"

"ಕೇಳೋ ಪೂರ್ತಿ. ಬೈಯೋದು ಅಂದ್ರೇನು. ಅವನ ಮುಖ್ದ ನೀರೆಲ್ಲಾ ಇಳ್ಸಿಬಿಟ್ಟೆ—"ನಿಮಗೇನು ನಾಗರಿಕತೆ ಲಕ್ಷಣ ಗೊತ್ತಿಲ್ಲ. ಸಂಭಾವಿತ ಜನರಿಗೆ ಬಂದು ಹಿಂಸೆ ಕೊಡೋದು. ಎಲ್ಲಯ್ಯಾ ಹೇಳಿದೆ ನಿಮ್ಮ ಕಾನೂನಲ್ಲಿ, ಹೀಗೆ ನಿದ್ರೆ ಕೆಡಿಸಬೇಕೆಂದು? ನಿನ್ಹಾಳು ಟಿಕೆಟ್ಟು ಬೇಕಾದರೆ ಹತ್ತೋವಾಗ ಇಲ್ಲ, ಇಳ್ಯೋವಾಗ ಕೇಳ್ಬೇಕು. ಈಗ ಜವಾಬ್ದಾರಿ ಸರ್ಕಾರ ಬಂದಿದೆ ಗೊತ್ತಿದ್ಯೋ ಇಲ್ವೊ? ಜವಾಬ್ದಾರಿಯಾಗಿ ವರ್ತಿಸಬೇಕಯ್ಯಾ, ನೌಕರ ಎಂದರೆ ಜನರ ನೌಕರ ಎಂದು ತಿಳೀಬೇಕು. ನಮ್ಮೇಲೆಲ್ಲಾ ಸವಾರಿ ಮಾಡೋದಲ್ಲ. ಬೇರೆ ಬೇರೆ ದೇಶದಲ್ಲಿ ನೋಡ್ಕೊಂಡು ಬನ್ನಿ ಹೇಗಿದೆ. ಜಪಾನಿನಲ್ಲಿ ಟಿಕೆಟ್ಟೇ ಇಲ್ಲ ಪ್ರಯಾಣಕ್ಕೆ ನಮ್ಮ ಜನ ನಮ್ಮಗಳಿಗೇ ಶತೃಗಳು. ಹುಷಾರಾಗಿ ನಡೆದುಕೊಳ್ಳಿ—ಹಾಗೆ ಹೀಗೆ—ಲಂಗು ಲೊಟ್ಟು—ಅಂತಂತೆಲ್ಲಾ ದಬಾಯಿಸಿ ಕೆಟವಿಬಿಟ್ಟೆ!"

"ಅಬ್ಬಾ" ಎಂದೆ ನಾನು. ನಿಜವಾಗೂ ಗಟ್ಟಿಗನೇ ನಮ್ಮ ಕಿಟ್ಟಿ ಅಂದುಕೊಂಡೆ. ಆದರೂ, ಪೂರ್ತಿ ಕಥೆ ಕೇಳಬೇಕೆಂದು ಮತ್ತು ನನ್ನ ಮಿತ್ರನ ಧೈರ್ಯದ ಪರ್ಯಾವಸಾನವನ್ನು ಅರಿಯಬೇಕೆಂದು "ಆಮೇಲೆ—ಅವನೂ ಸುಮ್ಮನೆ ಹೊರಟುಹೋದನೊ" ಎಂದೆ.

"ಆ....ಮೇ....ಲಿ ಡಬ್ಬಲ್ ಛಾರ್ಜ್ ನಾನೇ ಕೊಟ್ಟು ಬಿಟ್ಟೆ ಅಣ್ಣ!" ಎಂದ ರಾಗವಾಗಿ. ನನಗೆ ತಲೆ ತಿರುಗಿತು. ಕಿಟ್ಟು ಧೈರ್ಯದ ಕೊನೆಯ ಅಂಕ ನೋಡಿ ನಗು ಬಂತು. ಆದರೂ ಆ ಟಿಕೆಟ್ ಕಲೆಕ್ಟರು ಇಷ್ಟೆಲ್ಲಾ ಬೈಸಿ ಕೊಂಡು ಸುಮ್ಮನೇ ಹೋದನೇ ಎಂಬ ಕುತೂಹಲ. ಅದನ್ನು ಬಗೆಹರಿಸಲೇ ಬೇಕೆಂದು ಇಷ್ಟೆಲ್ಲಾ ಕೇಳಿ ಸುಮ್ಮನೇ ಬಿಟ್ಟನೋ ನಿನ್ನ" ಅಂದು ಕೇಳಿಯೇ ಬಿಟ್ಟೆ.

"ನಾ ಛಾರ್ಜ್ ಕೊಟ್ಟಿದ್ದು ಕೋರ್ಟಿನಲ್ಲಿ ಕಣೋ. ಧಡ್ಡ!!!" ಎಂದು ಉಸುರಿದ—ನಮ್ಮ ಕಿಟ್ಟ.

—ಹಾ. ರಾ.

---




ಅಮ್ಮಾ! ತಾಯಿ! ಕುರುಡ, ಭಿಕ್ಷ ಕೊಡೀಮ್ಮಾ.

# ಸ್ಥಿರ ಪ್ರತಿಜ್ಞೆ

'ಏನು' ಪಂಡಿತರೇ, ಇಂತಹ ಜ್ಞಾನ ಭಾಂಡಾರಿಗಳು ನೀವು ಇಷ್ಟು ಸ್ಫುಟವಾಗಿ ಸಂಸ್ಕೃತ ಆಡ್ತೀರಿ. ಇಷ್ಟು ಸಿಹಿಯಾದ ರುಚಿಯಾದ ಪರಿಣಾಮ ಕಾರಿಯಾದ ಕ್ಷೀರಾಸವಗಳನ್ನೂ ಕೊಡುತ್ತೀರಿ. ನೀವು ಜನಜಾಗ್ರತೆ ಉಂಟು ಮಾಡಿ ನಮ್ಮ ಪುರಾತನ ಚಿಕಿತ್ಸಾ ಕ್ರಮಗಳನ್ನೂ ಉದ್ಧರಿಸಬಾರದೇ! ನಾನೂ ನನ್ನ ಕೈಲಾದ ಯತ್ಕಿಂಚಿತ್ ಸಹಾಯ ಮಾಡುತ್ತೇನೆ. ಸಹಕಾರ ಸಂಘಗಳಲ್ಲಿ ಸಮಾಜ ಸೇವೆಗಾಗಿ ಓಡಾಡಿ ಸ್ವಲ್ಪ ಪರಿಶ್ರಮ ಇದೆ. ಇದಕ್ಕಾಗಿ ಒಂದು ಕ್ರಾಂತಿಯನ್ನೇ ಎಬ್ಬಿಸೋಣ".

ಈರೀತಿ ಹೇಳಿದ ನಮ್ಮ ರಾಮು, ಪಂಡಿತರ ಹತ್ತಿರ ಔಷಧೀಗೆ ನನ್ನೂ ಕರೆದುಕೊಂಡು ಹೋದಾಗ.

ನನಗೆ ಆಶ್ಚರ್ಯ! ಡಬ್ಬದಲ್ಲಿ ಬಂದ ಹಾಲಿನಲ್ಲೇ ಇವನ ಬಾಲ್ಯ. ಜರ್ಮನಿಯಿಂದ ಬಂದ ಟಾನಿಕ್ ಔಷಧಿಗಳಲ್ಲೇ ಇವನ ಪ್ರಾಯ. ಅಮೇರಿಕಾದ ಔಷಧಿಗಳಿಂದಲೇ ಇವನ ಸಂಸಾರ ಜೀವನ. ಇಂತಹವನು ಈಗ ಈ ನಾಲ್ವತ್ತರ ವಯಸ್ಸಿನಲ್ಲಿ ಕೇವಲ ಒಂದು ಹೊಟ್ಟೆ ನೋವಿಗಾಗಿ ಎಲ್ಲಾ ವಿದೇಶದ ಔಷಧಿಗಳನ್ನು ಬಿಟ್ಟು ನಮ್ಮ ಕಷಾಯ ಮೂಲಿಕೆಗಳಿಗೆ ಬಂದನಲ್ಲಾ! ಇದರ ಹಿಂದೆ ಏನೋ ಮಹತ್ತರ ಕಾರಣ ಇರಬೇಕು ಎನ್ನಿಸಿತು.

ಹಿಂತಿರುಗುವಾಗ ಅವನನ್ನ ಕೇಳಿದೆ. ಇದೇನು ರಾಮು ಇದ್ದಕ್ಕಿದ್ದ ಹಾಗೆ ಕಷಾಯಗಳ ಮೇಲೆ ಕಣ್ಣು ಹೋಯಿತು. ಆಸವಗಳ ಮೇಲೆ ಆಶೆ ಹುಟ್ಟಿತು. ಏನು ಕಾರಣ ಎಂದು.

ಆಗ ಅವನಂದ "ಇದು ಶಾಸ್ತ್ರೀಯ ವೈದ್ಯಕೀಯ. ಅಂತ ತಲೆಯೆಲಾ ತುಂಬಿಹೋಗಿತ್ತು ನನಗೆ ಆದರೆ ಮೊನ್ನೆ ಮೊನ್ನೆ ಈ ಹೊಟ್ಟೆ ನೋವಿಗೆ ಅಂತ ಅವರ ಹತ್ತಿರ ಹೋದಾಗ ಈ ಮಾಯಾಜಾಲ ಹರಿದು ಹೋಯಿತು. ಅದಕ್ಕೇ ನಮ್ಮ ದೇಶದ ನಮ್ಮ ಜನದ ರೋಗಗಳಿಗೆ ನಮ್ಮ ದೇಶೀ ಔಷಧಿಗಳೇ ಚೆನ್ನು ಅಂತ ಸಿದ್ಧಾಂತ ಮಾಡಿದೆ."

"ಅಲ್ಲವೋ ರಾಮು, ಹಾಗಾದರೆ ನಮ್ಮ ದೇಶದ ಜನರಿಗೆ ಅಮೇರಿಕಾದ ರೇಡಿಯೋ ಯಾಕೋ! ಇಂಗ್ಲೆಂಡಿನ ರಾಜಕೀಯದ ಮಾದರಿ ಯಾಕೋ! ಜಪಾನಿನ ಕೈಗಾರಿಕಾ ಕ್ರಮ ಯಾಕೋ! ನಾವೂ ಕಹಳೆ ಕೊಂಬು, ಒಂಟೆತ್ತಿನ ಗಾಡಿ. ರಾಜ, ಮಂತ್ರಿ, ಕೋಲುಗಾರ, ಅಂತ ಯಾಕೆ ಇರಬಾರದು. ಇನ್ನೂ

ಏನೋ ಕಾರಣ ಇರಬೇಕು. ಏನಾಯ್ತು ಹೇಳು" ಎಂದು ಪುಸಲಾಯಿಸಿದೆ. ರಾಮು ಹೇಳಿದ ಆಗ.

ಈ ಹೊಟ್ಟೆನೋವು ಬರುಕ್ಕೆ ಶುರುವಾಯ್ತು ನೋಡು—ಜ್ಞಾಪಕ ಇದೆಯೋ ನಿನಗೆ, ಹೋದ ವರುಷ ನನ್ನ ಭಾವಮೈದುನನ ಮದುವೇಲಿ. ಚೆನ್ನಾಗಿ ಹಸಿವಾಗ್ತಾ ಇತ್ತು. ಮದುವೆ ಮನೆ ಊಟ, ಕರ್ನಾಟಕರ ಅಡಿಗೆ ಚೆನ್ನಾಗಿಯೇ ತಿಂದಿದ್ದೆ. - ಮಧ್ಯಾಹ್ನ ಹನ್ನೆರಡು ಒಂದು ಗಂಟೆಗೆಲ್ಲಾ ಮದುವೆ ಊಟ ಆಗಿರುತ್ತಿತ್ತು. ನಾಲ್ಕು, ಐದು ಗಂಟೆ ಹೊತ್ತಿಗೆ ತಿಂಡಿ, ಕಾಫಿ ಹೊತ್ತಿಗೆ ಎದೇಲಿ ಏನೋ ಒತ್ತುಕ್ಕೆ ಶುರುವಾಗ್ತಾ ಇತ್ತು. ಮೆಲ್ಲಗೆ ಬೆಂಕಿ ಇಟ್ಟ ಹಾಗೆ ಆಗೋದು, ಎದೇ ಮಧ್ಯದಲ್ಲೇ ಪಂಜಿಟ್ಟಹಾಗೆ ಆಗೋದು. ದೇಶಾವರದ ತೇಗು ಬರೋದು. ಆಲೂಗೆಡ್ಡೆ ಹುಳೀನ ಮಧ್ಯಾಹ್ನ ಅಗಿದು ಅಗಿದು ತಿಂದು ನುಂಗಿದ್ದರೂ, ಐದು ಗಂಟೆ ಹೊತ್ತಿಗೆ ತಿರುಗಿ ಹೊಟ್ಟೇಲಿ ಆಲೂಗಡ್ಡೆ ಕೂಡಿ ಕೊಂಡಿತೋ ಎನ್ನುವಂತೆ ಆಗುತ್ತಿತ್ತು. ಹುಳಿಯ ಖಾರವೆಲ್ಲಾ ಎದೆಗೆ ಮೇಲುಕ್ಕಿದಂತೆ ಆಗುತ್ತಿತ್ತು. ಅಡಿಗೆ ಉಪ್ಪೆಲ್ಲಾ ಬಾಯಿಗೇ ಬಂದಂತಾಗು ತ್ತಿತ್ತು. ಉಂಡ ಊಟ ಎಲ್ಲಾ ತಿರುಗಿ ತಿರುಗಿ ಅಡಿಗೇಗೆ ಮೊದಲಿನ ಸ್ಥಿತೀಗೇ ಮಾರ್ಪಾಡು ಆಗುತ್ತಾ ಇದೆಯೋ ಎನ್ನಿಸುತ್ತಿತ್ತು.

ಆಗಲೇ ಪ್ರಸಿದ್ಧ ವೈದ್ಯ ಸ್ನೇಹಿತ ಶ್ರೀ|| ಶ್ಯಾಂ ಹತ್ತಿರ ಹೋದೆ. ಆತ ತಲೆ ಕೂದಲಿಂದ ಕಾಲು ಉಗುರಿನ ತನಕ ಪರೀಕ್ಷೆ ಮಾಡಿ ಬರೀ ಹಾಲು ಕುಡಿದುಕೊಂಡಿರು ಅಂದ. ಎರಡು ದಿನ ನೋವು ಬರಲಿಲ್ಲ. ಮೂರನೇ ದಿನ ತಿರುಗಿ ನೋವು ಬಂತು. ಅವನಿಗೆ ಹೇಳಿದೆ. ಆತ ಅಂದ. ಹೀಗಾಗಬಾರದು. ನೀನು ಶಸ್ತ್ರ ಚಿಕಿತ್ಸಾ ನಿಪುಣ ಶ್ರೀ|| ಭೀಂ ಅವರನ್ನು ಒಮ್ಮೆ ನೋಡು, ಹೇಗೂ ನಲವತ್ತು ಆಯ್ತು. ಏನಾದರೂ ಹೊಟ್ಟೇಲಿ ಕೆಟ್ಟ ಕೆಟ್ಟದು ಬೆಳದಿರಬಹುದು ಅಂತ. ಅವರ ಹತ್ತಿರ ಹೋದೆ. ಅವರು ಎಡಗೈಲಿ ಚಾಕು ಆಡಿಸ್ತಾಲೇ ಬಲಗೈಲಿ ಪರೀಕ್ಷೆ ಮಾಡಿದರು. ಕಡೇಗೆ ಚಾಕೂ ಕೆಲಸ ಏನೂ ಇಲ್ಲ ಇನ್ನೂನು. ಸದ್ಯಕ್ಕೆ ಉದರ ಪ್ರವೀಣ ಶ್ರೀ|| ರಾಂ ಅವರನ್ನು ಒಮ್ಮೆ ನೋಡಿ. ಆತ ಅಮೇರಿಕಾದಿಂದ ಈಗ ತಾನೇ ಬಂದಿದ್ದಾರೆ. ಬಹಳ ದೊಡ್ಡ ವೈದ್ಯ ಅಂದರು. ಶ್ರೀ ರಾಂ ಅವರನ್ನು ಇಪ್ಪತ್ತು ರೂಪಾಯಿಗೆ ನೋಡಿದೆ. ಆತ ನಲವತ್ತು ರೂಪಾಯಿನ 'ಕ್ಷ' ಚಿತ್ರಗಳನ್ನು ತೆಗೆಸಿದರು. ಸೈಕಲ್ ಪಂಪನ್ನೇ ಹೊಟ್ಟೆಗೆ ಹಾಕಿ, ಹೊಟ್ಟೇನ ಸಾರಿಸಿ, ಗುಡಿಸಿ, ರಂಗೋಲೀನೂ ಇಟ್ಟರೋ ಏನೋ—ಮೂರು ವಾರ ಆದಮೇಲೆ ನನ್ನ ಸಾಲದ ಬ್ಯಾಂಕು ಉಪ್ಪು ಅಂದ ಮೇಲೆ ಅವರು ಹೇಳಿದರು. "ರಾಯರೇ ಈಗಾಗಲೇ ಆರು ತಿಂಗಳಾಯ್ತು ನಿಮ್ಮ ಹೊಟ್ಟೆ ನೋವು. ದೇಹದಲ್ಲಿ ಎಲ್ಲಾ ಸರಿಯಾಗಿಯೇ ಇದೆ. ಕೆಲವು ವೇಳೆ ಮಾನಸಿಕ ಅವ್ಯವಸ್ಥೆಯಿಂದಲೂ, ಹೀಗಾಗಬಹುದು.

ಈ ರೀತಿ ಬುದ್ಧಿಯ ಅವ್ಯವಸ್ಥೆಗೆ ಶ್ರೀ|| ಮನಶ್ಶಾಸ್ತ್ರ ವಿಚಕ್ಷಣ ಶ್ರೀ ಕಾಮನ್ ಅವರನ್ನು ನೋಡಿ ಅಂದರು.

ಶ್ರೀ ಕಾಮನ್ ಅವರನ್ನು ನೋಡಿದೆ. ಅವರು ಕಣ್ಣು ಪರೀಕ್ಷೆ ಮಾಡಿದರು. ಮಂಡಿ ಕುಟ್ಟಿ ನೋಡಿದರು. ಹೊಟ್ಟೆಯನ್ನು ಮುಟ್ಟಲೇ ಇಲ್ಲ—ಎಲ್ಲಾ ಕೇಳಿ. ಎಲ್ಲಾ ನೋಡಿದ ಮೇಲೆ ಏನಂದರು ಗೊತ್ತೆ, "ನಿಮ್ಮ ಹೆಂಡತೀನ ನೋಡಬೇಕ್ರಿ. ಆಕೆ ಹತ್ತಿರ ಮಾತನಾಡಬೇಕು" ಎಂದರು.

ನನಗೆ ಕೋಪ ಬಂತು. "ನನಗೇ ಹೊಟ್ಟೆನೋವು ಡಾಕ್ಟರೇ ನನ್ನ ಹೆಂಡತೀಗಲ್ಲ. ಅವಳು ಚೆನ್ನಾಗಿಯೇ ಇದ್ದಾಳೆ" ಎಂದು ಹೇಳಿ ಅವರೇನೋ ಹೇಳುವುದಕ್ಕೆ ಶುರು ಮಾಡಿದ್ದರೂ ನಾನು ಹೊರಟು ಬಂದೆ. ಡಾ|| ಕಾಮನ್ ಅಂತೆ. ಫಾಲ್ಗುಣ ಶುದ್ಧ ಪೌರ್ಣಮಿ ದಿನ ಅವರನ್ನು ಗಳೂಗೆ ಕಟ್ಟಿ ಕಾಮನ ಹಬ್ಬ ಮಾಡಬೇಕು. ಎಂಟು ತಿಂಗಳಾಗ್ತಾ ಬಂತು. ನೋವು ನಿಲ್ಲಲೇ ಇಲ್ಲ. ಈ ಪಂಡಿತರ ಆಸವ ತೆಗೆದುಕೊಂಡ ಮೂರನೇ ದಿನದಲ್ಲಿ ನೋವೆಲ್ಲಾ ನಿಂತೇ ಹೋಯಿತು. ಅವರೇನೂ ಇನ್ನೊಬ್ಬರನ್ನು ನೋಡು ಅನ್ನಲಿಲ್ಲ. ನನ್ನ ನಾಯಿನ ಬಾಲ ನೋಡಬೇಕು; ನನ್ನ ಮಕ್ಕಳ ಹೆಸರೇನು ಅಂತ ಹೇಳಲಿಲ್ಲ. ನಾಡಿ ನೋಡಿ ಹಿರಿಯರು ಹೇಳಿದ ಆಸವ ಕೊಟ್ಟರು. ಎಲ್ಲಾ ವಾಸಿಯಾಯಿತು. ಅದಕ್ಕೇ ಈಗ ಸ್ಥಿರ ಪ್ರತಿಜ್ಞೆ ಮಾಡಿದ್ದೇನೆ. ಈ ಗುಟ್ಟನ್ನು ಸಮಾಜಕ್ಕೇ ಬಹಿರಂಗ ಪಡಿಸಬೇಕು ಅಂತ.

"ಅಂದ ಹಾಗೇ ರಾಮು! ನಿನ್ನ ಭಾವಮೈದ ಹೋದ ವರ್ಷ ಮದುವೆಯಾದನಲ್ಲಾ ಅವನಿಗೆ ಅಸ್ಸಾಂನಲ್ಲಿ ಐನೂರು ರೂಪಾಯಿ ಕೆಲಸ ಆಯ್ತಂತೆ ಹೌದೇ!" ಎಂದೆ.

"ಹೌದು ಕಣೋ! ಅವನಿಗೆ ಕೆಲಸದ ಆರ್ಡರು ಬಂದ ಎರಡನೇ ದಿವಸಾನೇ ಅವನೂ ಅವರ ತಾಯಿನೂ ಅಸ್ಸಾಂಗೆ ಹೊರಟುಹೋದರು. ಅವರನ್ನು ಕಳಿಸಿದ ಮೂರನೇ ದಿವಸವೇ ನಾನು ಪಂಡಿತರ ಹತ್ತಿರ ಹೋಗಿದ್ದು. ಭಾನುವಾರ ಒಳ್ಳೆಯ ದಿನ ಅಂತ."

"ನಿನ್ನ ಭಾವಮೈದ ಬಲು ಬುದ್ಧಿವಂತ ಅಲ್ಲವೇನೋ! ಅಷ್ಟು ಸಂಬಳ ಶುರುವಿನಲ್ಲೇ ಸಿಗಲು."

"ಬುದ್ಧಿವಂತನೇನೋ ಹೌದು ಪ್ರತಿ ಕ್ಲಾಸಿನಲ್ಲೂ ಫಸ್ಟ್ ಬರುತ್ತಿದ್ದ. ಆದರೆ ನಮ್ಮನೆಯಲ್ಲಿ ಅವನಿರೋ ತನಕ ಅವನೂ ಅವರಮ್ಮನೂ ನನ್ನ ಹೊಟ್ಟೆ ಉರಿಸುತ್ತಿದ್ದರು ಕಣೋ! ನನ್ನ ಟವಲೆಲ್ಲಾ ಅವನ ಪಾಲೇ. ನನ್ನ ಟೈ ಎಲ್ಲಾ ಅವನು ಹಾಕಿದ್ದೇ. ಸಿನಿಮಾಗೆ ಅಂತ ನಾವು ದಂಪತಿಗಳು ಹೊರಟರೆ ಹಿಂದೆಯೇ ನಕ್ಷತ್ರೀಕ. ಅವನಿಗಿಷ್ಟು ನಂಬರು ಬಂತು, ಅವನಿಗಿಂತಹ ಮೆಡಲ್

ಬಂತು ಅಂತ ನಮ್ಮತ್ತೆಯ ಜಂಭ. ನನಗೇನೂ ಯಾವಾಗಲೂ ಮೆಡಲ್ ಬರಲಿಲ್ಲ ಅಂತ ಹೇಳೋದೊಂದು ಬಾಕಿ.

ಈಗ ನನ್ನ ಪುಣ್ಯ ಚೆನ್ನಾಯ್ತು. ಅವರೂ ಹೋದರು ಪಂಡಿತರ ಆಸವದಿಂದ ಹೊಟ್ಟೆ ನೋವೂ ಹೋಯ್ತು. ಈಗ ತಣ್ಣಗೆ ತಿಂದುಕೊಂಡು ಉಂಡುಕೊಂಡು ಇರಬಹುದಪ್ಪಾ" ಅಂತ ಅಂದ.

"ಅದಕ್ಕೇ ಇರಬಹುದು ಡಾ|| ಕಾಮನ್ ಅವರು ನಿನ್ನ ಹೆಂಡತೀನ ನೋಡಬೇಕು ಅಂದಿದ್ದು. ಇದೆಲ್ಲಾ ತಿಳಿದುಕೊಳ್ಳೋಕ್ಕೇ ಇರಬಹುದು - ನಿನ್ನ ಮನಸ್ಸು ವಿಷವಾಗಿತ್ತು ಅವರು ಹೇಳಿದ್ದಕ್ಕೆ ಕೆಟ್ಟ ಅರ್ಥ ಮಾಡಿಕೊಂಡೆ" ಎಂದೆ.

"ಕೆಟ್ಟರ್ಥ ಅಂತೆ. ಆ ಕಾಮನ್ ಅವರನ್ನ ನೋಡಿದ್ದೀಯೋನೋ! ಗಂಡಸಂತೆ ಗಂಡಸು! ಲಿಪ್‌ಸ್ಟಿಕ್ ಹಾಕ್ಕೋತ್ತಾರೋ ಅವರು!—ಇದೆಲ್ಲಾ ಯೋಚಿಸಿದ್ದೀನಪ್ಪಾ! ನಮ್ಮ ದೇಶಕ್ಕೆ, ನಮ್ಮ ಜನಕ್ಕೆ, ನಮ್ಮ ದೇಶೀ ಔಷಧಿಗಳೇ ಹಿತ. ನನ್ನ ಪ್ರತಿಜ್ಞೆ ಸ್ಥಿರ ಅಂದ.

— ಪ್ರಸಾದ್.

---




ಅಖಿಲ ಕರ್ನಾಟಕವು ಮೈಸೂರನ್ನು ಒಲಿಸಕೊಳ್ಳಬೇಕು. (ಭಾಷಣ)

# ಸೀಬೆಮರ

ನಮ್ಮ ಪಕ್ಕದ ಮನೆ ಕಾಂಪೌಂಡಿನಲ್ಲಿ ಒಂದು ಸೀಬೆ ಮರ ಇದೆ; ತುಂಬ ಹಣ್ಣು. ಆದರೆ, ಆ ಮನೆಗೆ ಬಾಡಿಗೆಗೆ ಬಂದಿದ್ದ ಆಸಾಮಿ ಒಬ್ಬ ರಾಕ್ಷಸ. ಎಳೆಯ ಮಕ್ಕಳು ಸೀಬೆಕಾಯಿ ತಿನ್ನಬಾರದು, ಹೊಟ್ಟೆಗೆ ಒಳ್ಳೇದಲ್ಲ, ಎಂದು ಅವರು ಗರ್ಜಿಸುತ್ತಿದ್ದರು. ಅವರನ್ನು ಹೇಗಾದರೂ, ಆ ಮನೆಯಿಂದ ಓಡಿಸಬೇಕೆಂದು ನಾವು ಹುಡುಗರು ಪಿತೂರಿ ಹೂಡಿದೆವು. ಅವರ ಕಿಟಕಿ ಗಾಜುಗಳನ್ನೆಲ್ಲ ಕ್ರಿಕೆಟ್ ಆಡುತ್ತ ಒಡೆದೆವು. ಅವರ ಮನೆ ಕರು ಬಾಲಕ್ಕೆ ಪಟಾಕಿ ಸರ ಕಟ್ಟಿ ಬೆಂಕಿ ತಗುಲಿಸಿದೆವು. ಇಲಿ ಬೋನಲ್ಲಿ ಇಲಿಗಳನ್ನು ಹಿಡಿದು ಅವರ ಮನೆ ಹಿತ್ತಲಿಗೆ ಆಚೆ ತೆಗೆದುಕೊಂಡು ಹೋಗಿ, ಅಲ್ಲಿ ಅವನ್ನು ಹೊರಕ್ಕೆ ಬಿಟ್ಟೆವು. ಅವರ ಮನೆಯವರಿಗೆಲ್ಲ ಅಡ್ಡ ಹೆಸರುಗಳನ್ನಿಟ್ಟು, ಹಿಂಬಾಲಿಸಿ ಕೂಗಿದೆವು. ಅವರ ಮನೆ ಗೋಡೆಯ ಮೇಲೆಲ್ಲ ಇದ್ದಿಲು ಸಾಹಿತ್ಯ ಬರೆದೆವು. ಆಸಾಮಿ ಜಗ್ಗಲಿಲ್ಲ. ನಮ್ಮ ಮನೆಯಲ್ಲಿದ್ದ ಹಾರ್ಮೋನಿಯಮನ್ನು ರಿಪೇರಿ ಮಾಡಿ, ಆಚೆ ಮನೆ ವಿಶಾಲಾಕ್ಷಿಯನ್ನು ಕರೆದು ಹಾಡಿಸಿದೆವು. ಆದರೂ, ಆತ ಕದಲಲಿಲ್ಲ. ನಮಗೆ ಆಶ್ಚರ್ಯವಾಯಿತು. ಗಾಯನ ಸಮಾಜಕ್ಕೆ ತಿಂಗಳಿಗೆ ಎರಡು ರೂಪಾಯಿ ಮೆಂಬರು, ಆತ! ಆಗ, ಸೋಮು ಒಂದು ಉಪಾಯ ಹೇಳಿದ. ಅವನು ಅವರ ಮನೆ ಎದುರುಗಡೆ ಇದ್ದ. ಅವರ ಮನೆಯಲ್ಲಿ ಒಂದು ರೇಡಿಯೋ ಇತ್ತು. "ನೋಡು! ರೇಡಿಯೋ ಆಫೀಸಿಗೆ ಕಾಗದ ಬರೆದು, ಇದು ನನ್ನ ಮೆಚ್ಚಿನ ಸಿನಿಮ ಹಾಡು, ದಯವಿಟ್ಟು ಈ ರಿಕಾರ್ಡನ್ನು ಹಾಕಿ, ಎಂದು ಕೇಳಿಕೊಂಡರೆ, ಅವರು ಅದನ್ನೇ ನಂಬಿ, ನಮಗೋಸ್ಕರ ಆ ಅಸ್ತ್ರವನ್ನು ಪ್ರಯೋಗಿಸುತ್ತಾರೆ...." ಎಂದ. ಆಕಾಶ ಬಾಣ ಪ್ರಸಾರ ಕ್ಷೇತ್ರದಿಂದ ಹಾರಿಬಂದ ಕೂಡಲೇ, ಸೋಮು ಧ್ವನಿಯನ್ನು ಹೆಚ್ಚಿಸಿ, ಸೀಬೆ ಮರದ ಮನೆಯ ಕಡೆ ತಿರುಗಿಸಿದ. ತಮಿಳು ತಾರೆಗಳ ಹಾಡು ನಾಲ್ಕು ಬೀಳುತ್ತಲೂ, ಆತ ಬೇರೆ ಮನೆ ಹುಡುಕಲಾರಂಭಿಸಿದ. ಆಗ "ಸೋಮು ಕಲ್‌ಕಲ್ರೆ ನೌಜವಾನ್" ಹಾಕಿ ದಯವಿಟ್ಟು, ಎಂದು ಬರೆದ. ಇನ್ನೂ ಒಂದೆರಡು ಹಳೇ ರಿಕಾರ್ಡುಗಳನ್ನು ಹೊರತೆಗೆಸಿದ. ಅಷ್ಟರೊಳಗೆ, ಆತ ಮನೆ ಖಾಲಿ ಮಾಡಿದ ಅನ್ನಿ. ಆದರೆ, ಸುಖವೂ ದುಃಖವೂ ನಮಗೆ ಒಟ್ಟಿಗೆ ಪ್ರಾಪ್ತವಾಯಿತು. ನಾವು ನಿರಾತಂಕವಾಗಿ ತೋಟಕ್ಕೆ ನುಗ್ಗಿದಾಗ ಆ ಹಾಡುಗಳ ಹೊಡೆತಕ್ಕೆ, ಸೀಬೆ ಮರವೇ ಒಣಗಿಹೋಗಿತ್ತು.

# ಸುವರ್ಣಾಕ್ಷರ

ಮಹಾತ್ಮಾ ಗಾಂಧಿಯವರು ನವದೆಹಲಿ ಹರಿಜನ ಕೇರಿಯಲ್ಲಿ ವಾಸ ಮಾಡುತ್ತಿದ್ದಾಗ, ಒಮ್ಮೆ ಅವರ ವರ್ಧಂತಿಯನ್ನು ಶಿಷ್ಯ ಮಂಡಲಿಯವರು ಅಲ್ಲಿ ಆಚರಿಸಿದರು. ಬಾಬು ರಾಜೇಂದ್ರ ಪ್ರಸಾದರು ಆದಿನ ಹರಿಜನ ಬಾಲಕ ಬಾಲಿಕೆಯರಿಗೆ ಸಿಹಿ ತಿಂಡಿ ಹಂಚಿದರು. ಆಗ ಬಾಪೂಜಿ, "ಇದು ತಪ್ಪು! ನನ್ನ ಹುಟ್ಟಿದ ಹಬ್ಬ, ಸರಿ! ಹಂಚುವುದು ಪ್ರಸಾದರು, ಸರಿ! ಹಂಚುತ್ತಿರುವುದು ಹರಿಜನ ಶಿಶುಗಳಿಗೆ, ಸರಿ! ಆದರೂ, ತಪ್ಪು. ಹಸಿವಿಲ್ಲದಾಗ, ಆಹಾರ ತೆಗೆದುಕೊಳ್ಳುವುದೂ, ಆಹಾರ ನೀಡುವುದೂ, ರಾಷ್ಟ್ರ ದ್ರೋಹ. ಆಹಾರದ ಅಭಾವವಿರುವ ಈಗಂತೂ, ಇದು ತೀರ ಅಕ್ಷಮ್ಯ" ಎಂದು ನುಡಿದರು ಹೆಜ್ಜೆ ಹೆಜ್ಜೆಗೂ, ಉಪಾಹಾರ, ಫಲಾಹಾರ, ಭೋಜನಕೂಟಗಳನ್ನೇರ್ಪಡಿಸುತ್ತಲೂ, ಅವುಗಳಲ್ಲಿ ಭಾಗವಹಿಸುತ್ತಲೂ ಇರುವ ಗಾಂಧೀ ಭಕ್ತರಿಗೆ ಅಂದು, ರಾಷ್ಟ್ರ ಪಿತನು ಪಾಠಕಲಿಸಿದನು........ಇಂದು........?

ಮಹಾತ್ಮಾ ಗಾಂಧಿಯವರು ಎರವಾಡಾ ಕಾರಾಗೃಹದಲ್ಲಿ, ಬ್ರಿಟೀಷ್ ಚಕ್ರವರ್ತಿಯ ಅತಿಥಿಯಾಗಿದ್ದಾಗ, ಅವರಿಗೇನು ಖಾಲಿ ಕಾಗದಕ್ಕೆ ಅಭಾವವೆ? ಕೊರತೆಯೆ? ತಿಂಗಳಿಗಿಷ್ಟು ಪತ್ರ ಬರೆಯಬಹುದು ಎಂದಿತ್ತಲ್ಲಾ! ಅದಷ್ಟನ್ನಾದರೂ ಬರೆಯಲು ಅವರಿಗೆ ಸರ್ಕಾರದವರು ಕಾಗದ ಮಾಡಲಾರರೆ? ಆದರೂ ಅವರು, ಸಾರ್ವಜನಿಕರಿಂದ ಕಂದಾಯದ ಮೂಲಕ ಶೇಖರಿಸಿದ ಹಣದಿಂದ ತೆಗೆದ ಕಾಗದ, ಇದನ್ನು ಪೋಲು ಮಾಡಬಾರದೆಂದು, ತಮಗೆ ಬಂದ ಲಕ್ಕೋಟೆಗಳನ್ನು ತಿರುಗ ಮುರುಗ ಮಾಡೋದು, ಪತ್ರಗಳಲ್ಲಿ ಬರೆಯದೆ ಬಿಟ್ಟಿರುವ ಕಾಗದದ ತುಂಡುಗಳನ್ನು ಕತ್ತರಿಸುವುದು ಇವೇ ಮುಂತಾದ ಉಪಾಯಗಳಿಂದ ಪೇಪರ್ ಸಂಪಾದಿಸಿ, ಅವುಗಳಲ್ಲಿ ಗೆಳೆಯರಿಗೂ, ಶಿಷ್ಯರಿಗೂ ಕಾಗದ ಬರೆಯುತ್ತಿದ್ದರು. ಕಾರಾಗೃಹದ ಹೊರಗೂ ಅಷ್ಟೆ! ಹತ್ತೂ ಜನರ ಹಣ ಅಣುಮಾತ್ರವೂ ಪೋಲಾಗಬಾರದು, ಆದಷ್ಟು ಮಿತವ್ಯಯದಲ್ಲಿ ಸಾರ್ವಜನಿಕ ಸೇವೆ ನಡೆಯತಕ್ಕದ್ದು ಎಂದು ಅವರು ದೃಢಸಂಕಲ್ಪ ಮಾಡಿದ್ದರು. ಇನ್ನಾದರೂ ಪರಿಪಾಲಿಸಬಾರದೇಕೆ?

ಮಹಾತ್ಮಾ ಗಾಂಧಿಯವರು ಭೋಜನ ಮುಗಿದ ಕೂಡಲೇ ತಾವು ಊಟ ಮಾಡಲು ಉಪಯೋಗಿಸುತ್ತಿದ್ದ ತಟ್ಟೆಯಲ್ಲಿ ಒಂದಿಷ್ಟು ನೀರು ಹಾಕಿ, ಅದನ್ನು

ಕುಡಿಯುತ್ತಿದ್ದರು. ಅಲ್ಪ ಸ್ವಲ್ಪ ಅನ್ನಶೇಷ ಅದರಲ್ಲಿ ಉಳಿದಿದ್ದರೆ, ಅದನ್ನು ವೃಥಾ ಎಸೆಯಬಾರದು, ಎಂದು. ಅಂಥ ನಿಷ್ಠೆ ನಮಗೆ ಇನ್ನೆಲ್ಲಿ? ೩೦೦ ಅಡಿ ಎತ್ತರದ ಅವರ ವಿಗ್ರಹವನ್ನು ಬೊಂಬಾಯಲ್ಲಿ ನಿಲ್ಲಿಸುತ್ತೇವೆ; ೮೦ ಅಡಿ ಎತ್ತರದ ಸ್ತೂಪವನ್ನು ಮದ್ರಾಸಿನಲ್ಲಿ ನಿಲ್ಲಿಸುತ್ತೇವೆ. ಕಾಲ, ಹಣ, ಅನ್ನ ಯಾವುದನ್ನೂ ಪೋಲುಮಾಡಬಾರದೆಂದು ಬಾಪೂಜಿ ಹೇಳುತ್ತಿದ್ದರು, ಹಾಗೆಯೇ ಆಚರಿಸುತ್ತಿದ್ದರು, ಎಂದು ಅವುಗಳ ಮೇಲೆ, ಸುವರ್ಣಾಕ್ಷರಗಳಿಂದ ಕೆತ್ತಿಸುತ್ತೇವೆ— ಮುಂದಕ್ಕೆ ನಮ್ಮ ಮಕ್ಕಳೂ, ಮೊಮ್ಮಕ್ಕಳೂ ನೋಡಿ ಕಲಿಯಲಿ, ಎಂದು. ಆದರೆ, ನಾವು ಕಲಿತಿದ್ದೇನು?

ರೇವಣ್ಣ.—

—(o)—




ಹೊಸದಾಗಿ ವರ್ಗವಾಗಿಬಂದು— ಮುಸಾಫರ ಖಾನೆಯಲ್ಲಿ ವಾಸಿಸುತ್ತಿರುವ ವೈದ್ಯ:

—"ಅಂದ್ಹಾಗೆ! ಗೌಡರೆ—ನಿಮ್ಮ ಖಾಲಿ ಮನೇನ ನಂಗೇ ಬಾಡಿಗೆಗೆ ಕೊಡುತ್ತೀರಿ ಅಲ್ಲವೇ?"

# ಏನನ್ಯಾಯ!!

ಈ ಸರ್ಕಾರಾನಾ ಉರುಳಿಸಲೇ ಬೇಕು ಕಣೋ! ಏನನ್ಯಾಯ ಅಂತೀ! ನೋಡಪ್ಪ ಮೊನ್ನೆ ಮೊನ್ನೆ ತನಕ ಈ ಬಟ್ಟೆ ಕಂಟ್ರೋಲ್ ಇತ್ತು. ಎಷ್ಟು ಚೆನ್ನಾಗಿತ್ತು ಅಂತಿ ಆಕಾಲ. ಮೂರು ವರ್ಷಕಾಲಕ್ಕೆ ಒಂದು ಸೀರೆ, ಪ್ರಿಂಟೆಡ್ ಕಾಟನ್ ಸೀರೆ ಆರು ರೂಪಾಯಿ ಇಷ್ಟೇ ನನಗೆ ಖರ್ಚು, ನನ್ನ ಹೆಂಡತಿ ಉಡುಪು ವಸನಗಳಿಗೆ.

ಯಾವಾಗ ಕೇಳಿದರೂ ಕಂಟ್ರೋಲ್ ಬಂದಿದೆ ಕಣೆ. ಒಂದು ಸೀರೆ ಬೇಕು ಅಂದರೆ ಹರಿದುಹೋದ ಸೀರೆ, ನಮ್ಮ ರೇಷನಿಂಗ್ ಕಾರ್ಡು ಎರಡನ್ನೂ ಕಛೇರಿಗೆ ಒಂದು ಸ್ಟಾಂಪ್ ಪೇಪರ್ ಮೇಲೆ ಅರ್ಜಿ ಬರೆದು ಕಳಿಸಿ ಅಂತ ಹೇಳ್ತಾರೆ. ಅಧಿಕಾರಿಗಳು ಆ ಸೀರೆ ಪೂರ್ತಿ ಹರಿದುಹೋಗಿದೆಯೇ? ಅದು ಮಾನ ಕಾಪಾಡಲು ಅಸಾಧ್ಯವೇ? ಛಳಿ ತಪ್ಪಿಸಲು ಅನರ್ಹವೇ? ಎಂದು ಪ್ರವೀಣರಿಂದ ಪರೀಕ್ಷಿಸಿ, ಸ್ಟಾಂಪು ಕಾಗದ ಸರಿಯಾಗಿದೆಯೋ ಅಂತ ಅಜಮಾಯಿಷಿ ಮಾಡಿ ನಂತರ ರೇಷನ್‌ಕಾರ್ಡು ನೋಡಿ, ಓಹೋ! ಇಷ್ಟು ಜನ ಇರುವ ಮನೆಯವರಿಗೆ ಆರು ಮೊಳದ ಸೀರೆ ಬೇಕು ಅಥವಾ ಮೂರೇ ಮೊಳ ಸಾಕು ಎಂದು ನಿರ್ಧರಿಸಿ, ನಂತರ ಕೆಲವಾರು ತಿಂಗಳಲ್ಲೇ ಹೊಸ ಸೀರೆಗೆ ಒಂದು ಪರ್ಮಿಟ್ಟು, ನಮ್ಮ ಹಳೇ ರೇಷನ್ ಕಾರ್ಡು ಹರಿದು ಹೋದ ಸೀರೆ ಇಷ್ಟನ್ನೂ ಕಳಿಸುತ್ತಾರೆ.

ಆದರೆ ಈ ಕೆಲವಾರು ತಿಂಗಳು ನಾವು ರೇಷನ್ ಇಲ್ಲದೆ ಹೇಗೆ ಬದುಕಲು ಸಾಧ್ಯ! ಆ ಹಳೇ ಸೀರೇನ 'ದಟ್ಟಿ' ಮಾಡಿಕೊಂಡು ಮಗೂಗಾದರೂ ಈಗ ಹಾಸಬಹುದು ಅದೂ ಇಲ್ಲವಾಗುತ್ತಲ್ಲ, ಈ ಕೆಲವು ತಿಂಗಳು. ಹಾಗೂ ಹಳೇ ಸೀರೆ ಬೇರೆಯುವರದು ವಾಪಸು ಕಳಿಸಿದರೆ, ಅದನ್ನು ಹೇಗೆ ನಮ್ಮ ಮಕ್ಕಳಿಗೆ ಉಪಯೋಗಿಸುವುದು? ಈ ಕಾರಣಗಳಿಂದ ಇದ್ದ ಹರಿದ ಸೀರೇಲೆ ಕಾಲ ಹಾಕೋಣ. ಮನೇಲಿರೋವಾಗ ಯಾವ ಸೀರೆ ಆದರೇನು? ಯಾರು ತಾನೇ ನೋಡ್ತಾರೆ? ಹೊರಗಡೆ ಹೋಗೋವಾಗ ಹೇಗೂ ಮದುವೇಲಿ ಕೊಟ್ಟ ಪೀತಾಂಬರ ಇದೆ. ಅದನ್ನೇ ಉಟ್ಟುಕೊಂಡು ನಲಿಯಬಹುದು."

ಹೀಗೆಲ್ಲಾ ಮಾತನಾಡಿ ಸೀರೆ ಮಾತನ್ನೇ ಮೂರು ವರ್ಷ ಮರೆಮಾಚಿಟ್ಟೆ.

ಆದರೆ ಈಗ ನೋಡ್ರಿ! ಈ ಸರ್ಕಾರದವರು ಈ ಕಂಟ್ರೋಲ್ ತೆಗೆದು ಬಿಟ್ಟಿದ್ದಾರೆ. ಮನೆ್ಗೆ ಹೋಗೋ ಹಾಗಿಲ್ಲ. ಕಟ್ಟಿ ಹಾಕುಕ್ಕೆ ಮುಂಚೇನೆ ಸೀರೆ ಮಾತು. ಸಾರು ಬಡಿಸೋದೇ ತಡ—"ಅಲ್ಲಾ ಅಂದ್ರೆ, ಕುಪ್ಪಸಲಾಲ್ ಅಂಗಡೀಲಿ ತರಹಾವಾರಿ ಸೀರೆಗಳು ಬಂದಿದೆಯಂತೆ. ಎಷ್ಟು ಬೇಕಾದರೂ ಕೊಡ್ತಾರಂತೆ. ಕಂಟ್ರೋಲ್ ಇಲ್ಲವಂತೆ ಎಂದು ಮಾತು ಶುರು ಮಾಡುತ್ತಾಳೆಯೇ ವಿನಹಾ ತುಪ್ಪ ಬಡಿಸೋಣ ಸಾರನ್ನಕ್ಕೆ ಅಂತಲೇ ತೋಚುಲ್ಲ ಅವಳಿಗೆ. ಮನೇಲಿ ನನ್ನ ಪಾಡು, ನಾಯಿ ಪಾಡಾಗಿದೆ.

ಏನು ಅವಸರ ಈ ಸರ್ಕಾರಕ್ಕೆ ಅಂತೀನಿ? ಹೊಟ್ಟೆ ತುಂಬಾ ಅನ್ನ ಕೊಡೋ ಯೋಗ್ಯತೆ ಇಲ್ಲ! ಹೊಟ್ಟೆ ಮೇಲೆಲ್ಲಾ ಒದ್ದೆ ಬಟ್ಟೆ ಹಾಕೊಳ್ಳಿ ಅಂತ ಈ ಬಟ್ಟೆ ಕಂಟ್ರೋಲ್ ತೆಗೆದುಬಿಟ್ಟಿದ್ದಾರೆ. ಈ ಸರ್ಕಾರಕ್ಕೆ ಏನು ಹೆಂಡತಿ ಸಂಸಾರ ಏನೂ ಇಲ್ಲವೇ? ಇಂತಹ ಆಚರಣೆಯಿಂದ ದೇಶದ ಬೆನ್ನು ಮೂಳೆಯಂತಿರುವ, ಸಮಾಜದ ಕೋಟೆಯಂತಿರುವ, ನಮ್ಮ ಸಂಸಾರಗಳೇ ಹಾಳಾಗಿ ಹೋಗುತ್ತವಲ್ಲ! ಹಾಲಿನಂತಹ ಸಂಸಾರದಲ್ಲಿ ಈ ಹುಕುಂ ಹುಳಿ ಹಿಂಡುತ್ತಲ್ಲ! ಈ ಸರ್ಕಾರ!

ಇದನ್ನು ಇರುಳಿಸಲೇ ಬೇಕು!—ಅಥವಾ ಈ ಸರ್ಕಾರಕ್ಕೆ ಒಂದು ಸವಾಲ್ ಹಾಕಲೇಬೇಕು. ಇಲ್ಲಾ! ಬಟ್ಟೆ! ಬಟ್ಟೆ ಅಲ್ಲದಿದ್ದರೂ ಸೀರೆ ಕಂಟ್ರೋಲ್ ಇರಲೇಬೇಕು. ಅಥವಾ! ಹಿಂದೂ ಕೋಡ್ ಬಿಲ್ ಬೇಗ ಜಾರಿಗೆ ತಂದು ವಿವಾಹ ವಿಚ್ಛೇದನ ಆಗುವಂತೆ ಬೇಗ ಮಾಡಬೇಕು. ಈ ಸವಾಲಿಗೆ ಉತ್ತರ ಬರದೇ ಇದ್ದರೆ ರಾಜಕೀಯಕ್ಕೆ ನಾವೂ ಇಳಿಯಬೇಕು.

— ಶಿವು.

— —

ತಮಿಳು, ತೆಲುಗು ಗಲಾಟೆಯಲ್ಲಿ ಸದ್ಯ ಮೈಸೂರು ಬದುಕಿಕೊಂಡಿತು.
—ಅವರಿಬ್ಬರೂ ಅಲ್ಲಲ್ಲೇ ಇದ್ದಾರಂತೆ.

*    *    *

ಅನಾಥಾಲಯದಲ್ಲಿ ಈ ಸಾರಿ ಕಾಮನ ಹಬ್ಬವನ್ನು ಆಚರಿಸಿದಾಗ, ಧರ್ಮಬುದ್ಧಿಯವರು ಒಂದು ಶಂಖವನ್ನು ದಯಪಾಲಿಸಿದರಂತೆ.

*    *    *

## ಸಲಹೆಗಳ ಸುರಿಮಳೆ

ಹಿಂದೂಸ್ತಾನಕ್ಕೆ ಸುಖ, ಶಾಂತಿ, ಸಂಪತ್ಸಮೃದ್ಧಿ ಉಂಟಾಗಲು ಅತಿ ಮುಖ್ಯ ಸಲಹೆ ಏನು? ಎಂದು ನಾನು ಅನೇಕ ನಾಯಕರನ್ನು ಕೇಳಿದೆ. ಅವರ ಉತ್ತರಗಳನ್ನು ಇಲ್ಲಿ ಕೊಟ್ಟಿದೇನೆ. ಯಾವ ಯಾವ ಪಕ್ಷ ಎಂಬುದನ್ನು ನೀವೇ ಊಹಿಸಿಕೊಳ್ಳಬಹುದು.

"ಕಾರಾಗೃಹವಾಸ ಅನುಭವಿಸಿದವರಿಗೆಲ್ಲ ತಕ್ಕ ಪ್ರತಿ ಫಲ ದೊರೆಯಬೇಕು.

ಮಹಾಭಾರತ ಮತ್ತೆ ತಲೆದೋರಿ ಕುರುಕ್ಷೇತ್ರ ನಡೆಯಬೇಕು.

ಶಿವಾಜಿ ಮಹರಾಜ್ ಡಿಲ್ಲಿಯಿಂದ ಮತ್ತೆ ತಪ್ಪಿಸಿಕೊಂಡು ಬಂದು ಛತ್ರಪತಿ ಯಾಗಬೇಕು.

ಜಲಜನಕ ಬಾಂಬರಗಂಡ ಮೂರು ರಾಯರ ಗಂಡ ಸ್ಟಾಲಿನ ನೆರಳು ನಮಗೆ ದೊರೆಯಬೇಕು.

ಎಲ್ಲಾ ಕಾರ್ಖಾನೆಗಳೂ, ಕೆರೆ ಬಾವಿಗಳೂ, ಕಣಜ ಬಣಜಗಳೂ, ಸರ್ಕಾರಿ ನೌಕರರ ಕೈಗೆ ಸಿಗಬೇಕು.

ರಾಮಾಯಣ ಮನುಸ್ಮೃತಿ ಇವುಗಳನ್ನು ಜನ ಸಂಪೂರ್ಣ ಮರೆಯಬೇಕು.

ಜಾತಿ ಜಾತಿಗೂ ಬೇರೆ ಬೇರೆ ಪ್ರಾಂತವೇರ್ಪಟ್ಟು, ಒಂದೊಂದು ಪ್ರಾಂತಕ್ಕೂ ಪಾರ್ಲಿಮೆಂಟರಿ ಸೆಕ್ರಟರಿಗಳೂ ಸೇರಿ ನೂರಿನ್ನೂರು ಜನರ ಮಂತ್ರಿ ಮಂಡಲ ರಚನೆಯಾಗಬೇಕು

ಜನರ ಕಿಸೆಯಲ್ಲಿರುವ ಹಣ ಸರ್ಕಾರದ ಬೊಕ್ಕಸಕ್ಕೆ ಬಂದು ಬೀಳಬೇಕು.

ಸರ್ಕಾರದ ಬೊಕ್ಕಸದ ಹಣ ನಮ್ಮ ಕಿಸೆಗೆ ಬೀಳಬೇಕು.

ಪರೀಕ್ಷೆಗಳು ತೊಲಗಬೇಕು

ಚಲಚ್ಚಿತ್ರಗಳ ಮೂಲಕ ನಮಗೆ ಆಗುತ್ತಿರುವ ನವರಸ ಶಿಕ್ಷಣವನ್ನು ಇನ್ನೂ ಹೆಚ್ಚಿಸಿ ಶಾಲೆಗಳನ್ನು ಮುಚ್ಚಬೇಕು.

ಎಂಡ ಮಾಡೋದು ಕುಡಿಯೋದು ಎರಡ್ನೂ ಗ್ರಾಸ್ತ ಅನಬೇಕು.

ಎರಡು ವರ್ಷ ಹಿಂದೆಯೇ ಸಾಂಕ್ಷನಾದ ಗ್ರೇಡುಗಳನ್ನು ಭರ್ತಿಮಾಡಿ ಬಾಕಿ ಸಂಬಳವನ್ನು ಒಟ್ಟಾಗಿ ಕೊಟ್ಟು ಸಾಲ ತೀರಿಸಲು ಸಹಾಯಮಾಡಬೇಕು.

ಹುಣಿಸೆ ಹಣ್ಣಿನ ಬೆಲೆ ಇಳಿಯಬೇಕು.

ಚಿಕ್ಕಪೇಟೆ, ಬಳೆಪೇಟೆ, ಅವೆನ್ಯೂ ರೋಡು ಒಮ್ಮುಖ ಸಂಚಾರ ರದ್ದಾಗಬೇಕು.

ನನಗೊಂದು ಬಿಟ್ಟಿ ಕಾರು ಬೇಕು."

—ರೇವಣ್ಣ.

# ಕೊರವನ ಸಿಂಹಾವಲೋಕನ

—— ೦ ——

'ಈ ಸಾರಿ ರಷ್ಯಾಕ್ಕೆ ನಮ್ಮ ನೆಹ್ರೂಜೀನ ಕರೆದೇ ತರಿತಾರೆ' ಅಂತ ಅಂದ ಕೊರವ, ಚಿಟಿಕಿ ನಶ್ಯ ಏರಿಸುತ್ತಾ.

'ಅದು ಹೇಗೆ ಗೊತ್ತು' ಎಂದೆ.

'ನೋಡು! ಇದನ್ನೂ ಭವಿಷ್ಯ ಹೇಳುಕ್ಕೆ ನಾಡೀ ಗ್ರಂಥ ಬೇಕೆ? ಮೊನ್ನೆ ಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ನೆಹ್ರೂಜೀ ಹೇಳಲಿಲ್ಲವೇ? ಕಾಂಗ್ರೆಸ್ ಕಾಯಕಲ್ಪ ಆಗಬೇಕು. ಕಾಯಕಲ್ಪ ಆಗಬೇಕಾದರೆ ಬಿಸಿನೆತ್ತಿರು, ತರುಣ ನೆತ್ತಿರುಬೇಕು ಅಂತ ಅಂದರೆ ಏನರ್ಥ? ಕೆಂಪು ವರ್ಣಕ್ಕೆ ತಿರುಗಬೇಕು. ಕಾಂಗ್ರೆಸ್ಸಿನ ದೃಷ್ಟಿ ಕೋನವೇ ಕೆಂಪಾಗಬೇಕು. ಮುಪ್ಪಿನ ನೀಲಿ ರಂಗು ಇನ್ನು ಮುಂದೆ ಅಧಿಕಾರಕ್ಕೆ ಆಯೋಗ್ಯ ಎಂದು ಹೇಳಲಿಲ್ಲವೇ?.' ಅದಕ್ಕೇ ರಷ್ಯಾದಲ್ಲಿ ಧಾತ್ರೀಹವನ ನಡೆಸಿ. ನೆಹ್ರೂಜೀಗೆ ಆಹ್ವಾನ ಕೊಟ್ಟೇ ಕೊಡು ತ್ತಾರೆ. ಚೀನಾ ಆಯಿತು. ಟಿಬೆಟ್ ಆಗ್ತಾ ಇದೆ. ಭಾರತಾನೂ ಬಲೀಗೆ ಬೀಳಲಿ ಅಂತ ಅಲ್ಲವೇ? ಅಂದ.

ನನ್ನ ಕೆಂಪಂಚಿನ ಕೈ ವಸ್ತ್ರವನ್ನು ಮುಚ್ಚಿಟ್ಟೆ ಜೇಬಲ್ಲಿ.

ಆಗತಾನೆ ಅಮೇರಿಕಾದ ಸುದ್ದಿ ಓದುತ್ತಿದ್ದೆ. ಕ್ಲಬ್ಬಿನ ಬಿಸಿ ವಾತಾವರ ಣದಲ್ಲಿ. ಆಗ ನಾನೊಬ್ಬನೇ ಇದ್ದೆ ಆ ಕೊಠಡಿಯಲ್ಲಿ. ಪೂರ್ತಿ ಪೇಪರು ಓದಬಹುದು ಅಂತ ಆಶೆಯಾಗಿದ್ದೆ.

ಗಿರ್ಕಿ ಚಪ್ಪಲಿಯ ಸಪ್ಪಳ ಆಯ್ತು. ಓಹೋ! ಬಂತು ಸವಾರಿ! ಕೊರವನದು ಎಂದುಕೊಂಡೆ. ಆ ಬಾಗಿಲಲ್ಲಿ ಆತ ಬರುವ ಹೊತ್ತಿಗೆ ಈ ಬಾಗಿಲಲ್ಲಿ ಓಡಿಬಿಡೋಣ ಎಂತ ಅವಸರವಾಗಿ ಎದ್ದೆ. ಈ ಬಾಗಿಲ ಕಡೆಗೆ ಓಡಿದೆ. ಹಾಳು ಬಾಗಿಲುಗಳು ಈ ಬಾಗಿಲಿನಲ್ಲಿಯೇ ಕೊರವ ಬಂದ ಶಬ್ದ ಕೇಳಿದ್ದು ಆ ಕಡೆ ನಮ್ಮ ಕ್ಲಬ್ಬಿನ ಕೊಠಡಿಗಳೇ ಹೀಗೆ.

'ಏನಯ್ಯಾ ಓಡ್ತಾ ಇದ್ದೆ. ದೇಶವನ್ನು ತೆಗೆದುಕೊಂಡೇ ಓಡ್ತಾ ಇದ್ದೆ'. ಅಂತಹ ಅವಸರ ಏನು? ಎಂದು ಹೇಳುತ್ತಾ ಗಂಟುಬಿದ್ದ.

'ಏನು ಅಮೇರಿಕಾದ ಸುದ್ದಿ, ಆ ಕುಂಭಕರ್ಣನದು ತಾನೇ' ಎಂದು ಶುರು ಮಾಡಿದ ನಾನು ಉತ್ತರ ಕೊಡಲು ಕೂಡ ಅವಕಾಶ ಕೊಡದೆ, ಮುಂದಿನ

ಯುದ್ಧ ಅಮೇರಿಕಾದಲ್ಲೇ ಕಣಯ್ಯಾ, ಈಗ ಅಲ್ಲಿ ನಿದ್ರೆ ಮಾಡುತ್ತಿದ್ದಾನಲ್ಲ ಅವನೇ ಕುಂಭಕರ್ಣ. ದಶಶಿರ ಅಣುಸಮಿತಿ ಕೂಡ ಅಲ್ಲೇ.

ಅಂದಮೇಲೆ ಅಲ್ಲೇ ಆಗಬೇಕು ಸಮರ. ಸಧ್ಯ ಭಾರತ ಬದುಕಿಕೊಂಡಿತು ಸದ್ಯಕ್ಕೆ ಅಂದ.

'ಯಾಕಯ್ಯಾ ! ಕುಂಭಕರ್ಣ ಅಂದೆ'

ಆ ಪೇಪರ್ ಓದಲಿಲ್ಲವೆ ? ಯಾವನೋ ಅಮೇರಿಕಾದಲ್ಲಿ ೧೪ ತಿಂಗಳಿಂದ ಒಂದೇ ಸಮನೆ ನಿದ್ರೆ ಮಾಡ್ತಾ ಇದಾನಂತೆ. ಅವನೇನೂ ಸಧ್ಯಕ್ಕೆ ಎಚ್ಚರವಾಗುಲ್ಲ. ಅಂತ ವೈದ್ಯರುಗಳು ಹೇಳಿದರಂತೆ ಅವನೇ ಕುಂಭಕರ್ಣನ ಪುನರವತಾರ. ಅವನು ಎದ್ದರೇ ರಾಮಾಯಣ ಕಾಳಗ ಕಣಯ್ಯಾ, ಅಷ್ಟು ಹೊತ್ತಿಗೆ ಯಾವುದಾದರೂ ಸೀತೆ ಸಬೂಬು ಸಿಕ್ಕೇ ಸಿಗುತ್ತೆ ಅಂದ.

* * *

ಎಂದೂ ಇಲ್ಲದ 'ಹ್ಯಾಟ್' ಹಾಕಿಕೊಂಡವನೊಬ್ಬ ನಮ್ಮ ಕ್ಲಬ್ಬಿಗೆ ಬರುತ್ತಿದ್ದ. ವರಾಂಡಾದಲ್ಲಿ ಕುಳಿತಿದ್ದ ನಮಗೆಲ್ಲಾ ಆಶ್ಚರ್ಯ! ಯಾರು ಇವ ಅಂತ, ಹತ್ತಿರ ಬಂದಾಗ ಗೊತ್ತಾಯ್ತು ಕೊರವ ಅಂತ.

ಅರೆ ! ಈಗಿನ ಟೋಪಿಗಳ ಕಾಲದಲ್ಲಿ ಬರೀ ಬೋಳುತಲೆಯ ಯುಗದಲ್ಲಿ, ಸ್ವತಂತ್ರ ಭಾರತದಲ್ಲಿ ಈ ರೀತಿ ಹ್ಯಾಟ್ ಹಾಕಿ ಮೆರೆಯಬಹುದೇ. ಅದೂ ಅಚ್ಚ ಭಾರತೀಯ ಹದಿನಾರಾಣೆ ಕನ್ನಡಿಗ ನಮ್ಮವನೇ ! ಎಂದು ಅಶ್ಚರ್ಯ ಪಡುತ್ತಾ ಇದ್ದೆವು.

ಅವನೇ ಶುರು ಮಾಡಿದ, ಕೂತಾಗಲೂ ಹಾಟ್ ತೆಗೆಯದೇ.

"ನನ್ನ ಮಗುವಿನ ಕೈಗಾಡಿಗೆ ಒಂದು ಟೈರು ಕೊಳ್ಳಬೇಕಾಯ್ತು ಅಂಗಡಿಗೆ ಹೋದೆ, ಅಲ್ಲಿ ಪರ್ಮಿಟ್ ತೆಗೆದುಕೊಂಡು ಬಾ ಎಂದು ಕಛೇರಿಗೆ ಕಳಿಸಿದರು. ಕಛೇರಿಯಲ್ಲಿ ಮುನಿಸಿಪಾಲಿಟಿ ಲೈಸೆನ್ಸ್ ಮಾಡಿಸಿಕೊಂಡು ಬನ್ನಿ ಅಂದರು—ಮುನಿಸಿಪಾಲಿಟೀಲಿ ನೀವು ವರಮಾನ ತೆರಿಗೆ ಕೊಟ್ಟಿದ್ದಕ್ಕೆ ದಾಖಲು ತೆಗೆದುಕೊಂಡು ಬನ್ನಿ ಎಂದರು. ವರಮಾನ ತೆರಿಗೆ ಆಫೀಸಿನಲ್ಲಿ ನಿಮ್ಮ ವರಮಾನ ಬಂದಿದ್ದಕ್ಕೆ ಕಾರಣಗಳನ್ನು ತಿಳಿಸಿ ಅಂದರು.

ಬೇಜಾರಾಗಿ ಬರ್ತಿದ್ದೆ ಟೈರು ಸಿಗದೆ. ಆಗ ದಾರಿಯಲ್ಲಿ ನಮ್ಮ ಸ್ನೇಹಿತ ಲಾಲು, ಈಗ ಏರೋಪ್ಲೇನಿನಲ್ಲಿ ಡ್ರೈವರಾಗಿ ಸೇರಿದ್ದಾನಲ್ಲ ಆತ ಸಿಕ್ಕ. ಅವನು ಹೇಳಿದ ಒಂದು ಹ್ಯಾಟು ತೋರಿಸುತ್ತಾ, "ಈ ಹ್ಯಾಟು ನೋಡು ಪ್ಲೇನಿಂದ ಪ್ಲೇನಿಗೆ—ಊರಿಂದ ಊರಿಗೆ—ದಿನದಿಂದ ರಾತ್ರಿಗೆ ಸುಮಾರು ಲಕ್ಷ ಮೈಲಿ ಸುತ್ತಿದೆ. ಇದನ್ನು ಹೇಗೆ ಸಾಗಿಸೋದು ಅಂತ ಯೋಚನೆ ಅಂದ.

ಆಗ ನಾನಂದೆ ನನಗೆ ಕೊಡು. ಈ ಹ್ಯಾಟಿನ ಹಾಗೇ ನಾನೂ ಕಛೇರಿ ಕಛೇರಿ—ಬಾಗಿಲು ಬಾಗಿಲು—ಸುಮಾರು ಲಕ್ಷ ನಿಮಿಷ ಸುತ್ತಿದ್ದೇನೆ. ಇದು ನನಗೇ ಸರಿ ಅಂತ ಇದು ಕೊಂಡೆ" ಅಂದ.

* * *

"ಚಿನ್ನದ ಗಣಿಯು ಕೂಲಿಗಳು ದಿಟವಾಗಲೂ ಚಿನ್ನದಂಥಾ ಮನುಷ್ಯ ರಯ್ಯಾ! ಹೊನ್ನಿನಂತಹಾ ಮನಸ್ಸುಳ್ಳವರು" ಎಂದು ಒದರಿದ ಕೊರವ, ನಾನು ಕ್ಲಬ್ಬಿಗೆ ಹೋದಾಗ, ಅವನಿಗೆ ನಮಸ್ತೆ ಎಂದಾಗ.

"ತಮಿಳು ಮಾತನಾಡೋರು, ಅಡ ಅಡ ಅಂತ ಅಡವೀಲೂ ಆಡೋರು! ೯೦೦೦ ಅಡಿ ಆಳದಲ್ಲಿ ದಡ ಬಡ ಅಂತ ಕುಟ್ಟೋರು, ಚಿನ್ನದ ಕಲ್ಲೇನೋ ತೆಗೆಯಬಹುದು. ಆದರೆ, ಹೃದಯ ಕಲ್ಲೋ! ಚಿನ್ನವೋ? ಹೇಗೆ ಗೊತ್ತು ಮಾಡೋದು" ಎಂದು ನಾನು ಯೋಚಿಸುತ್ತಾ ಕಿವಿ ಹಿಂದೆ ಕೆರೆದುಕೊಂಡೆ.

ಆಗಂದ ಕೊರವ. "ನೀನು ಕಿವಿ ಕೆರೆದುಕೊಳ್ಳುವುದರ ಅರ್ಥ ತಿಳಿಯಿತು. ಅದಕ್ಕೆ ಉತ್ತರ ಹೇಳ್ತೀನೆ ಕೇಳು.

"ಮೊನ್ನೆ ನಮ್ಮ ಮನೆ ಸಚಿವರು, ಗಾಂಧೀ ಭಕ್ತರು, ಖದ್ದರ್ ಧಾರಿಗಳು ಅಹಿಂಸಾ ಶಿಶು ಗಣೀಗೆ ಹೋದಾಗ, ಅಲ್ಲಿ ಸಿಕ್ಕ ಮುದಿ ಕೂಲಿಯವನನ್ನು ಅವರು ಆದರದಿಂದ ಮಾತನಾಡಿಸಿ "ನಮ್ಮ ಸರ್ಕಾರದಲ್ಲಿ ನಿನಗೆ ಸುಖವುಂಟೆ?" ಎಂದು ಕೇಳಿದಾಗ, ಆತ ಏನಂದ ಗೊತ್ತೆ?

"ಪ್ರಜಾ ಸರ್ಕಾರದಲ್ಲಿ, ನಿಮ್ಮ ಸರ್ಕಾರದಲ್ಲಿ, ನಾವು ಬದುಕಿಕೊಂಡೆವು. ರಾಷ್ಟ್ರಪಿತ, ಪೂಜ್ಯ ಬಾಪೂವಿಗೇ ಸಾಧ್ಯವಾಗದ ಕೆಲಸವನ್ನು ನಿಮ್ಮ ಸರ್ಕಾರ ಮಾಡಿದೆ.

"ಏನು ಅಂತಹುದು? ಎಂದು ಅಚ್ಚರಿಯಿಂದ ಆರಡಿ ಮೊಗ ಮಾಡಿ ಕೊಂಡು ಕೇಳಿದರು, ಶಾಂತಿ ದೂತನ ಶಿಷ್ಯರು.

ಆತ ಗೃಹ ಕೈಗಾರಿಕೆ ಒಂದನ್ನು, ಹಣ ಕೊಡುವ ಗೃಹ ಕೈಗಾರಿಕೆಯನ್ನು ಜನರಲ್ಲಿ ಹರಡಲು ಅಶಕ್ತನಾದ. ಆದರೆ, ನಿಮ್ಮ ಸರ್ಕಾರ ಈ ಪಾನ ನಿರೋಧ ವನ್ನು ಅಣಿಯಾಗಿ ಏರ್ಪಡಿಸಿದ ಮೇಲೆ, ಗೃಹ ಕೈಗಾರಿಕೆ ಈಗ ಆರ್ಥಿಕವಾಗಿ ಬಲವಾದ ಬುಡದ ಮೇಲೆ ನಿಂತಿದೆ. ಗುಡಿಸಲು ಬಿಟ್ಟು ಗುಡಿಸಲಲ್ಲಿ ಒಂದು ನೊರೆನೀರ ಕಾರ್ಖಾನೆ ಏರ್ಪಾಡಾಗಿದೆ. ಎಲ್ಲರಿಗೂ ಸಾಕಷ್ಟು ಹಣವೂ ಬರುತ್ತಿದೆ. ನಾವು ವರಮಾನ ತೆರಿಗೆ ಬೇಕಾದರೂ ಕೊಡುತ್ತೇವೆ" ಎಂದ ಆ ಮುದುಕ.

—ಹೊನ್ನಿನಂತಹ ಬುದ್ಧಿಯಯ್ಯಾ! ಆ ಕೂಲಿಗಳಿಗೆ ಎಂದ ಕೊರವ.

---

# ಬಿಸಿ ಬಿಸಿ ಗಾದೆಗಳು

---

ರಂಗನ ಮುಂದೆ ಶಿಂಗನೆ? ಟುಂಗನ ಮುಂದೆ ಚ್ಯಂಗನೆ?

ತಾನೂ ತಿಂದ, ಪರರಿಗೂ ತೆತ್ತ.

ಜಮ್ಮುವಿಗೆ ನುಗ್ಗಿ, ಹಮ್ಮು ಕುಗ್ಗಿತು.

ಕಾಳಸಂತೆ ಕೋರನಿಗೆ ಚಾವಟಿ ಏಟು ಅಂದ್ರೆ ಹೊಡೆಯೋರು ಯಾರು? ಹೊಡೆಸಿ ಕೊಳ್ಳೋರು ಯಾರು?

ಮೂರ್ತಿ ಚಿಕ್ಕದಾದರೂ, ಪೂರ್ತಿ ತಿಂದ.

ಕುಶ್ಮಾಂಡ ತಿಂದ ಮಕ್ಕಳೇ ಬದುಕುವುದಿಲ್ಲ; ಇನ್ನು ಕಾಶ್ಮೀರ ತಿಂದ ಮಕ್ಕಳ ಗತಿ ಏನು?

ಎಲ್ಲ ಪ್ರಾಂತಗಳ ದೋಸೆಯೂ ಥೂ! ಥೂ!

ಲಕ್ಕಿಲ್ಲದವನಿಗೆ ಅಕ್ಕಿಯ ಮೇಲಾಸೆ

ಅತ್ತು ಕರೆದು ಸ್ವತ್ತು ಮಾಡಿಕೊಂಡರು.

ಕ್ಯಾಚು ಬಿಟ್ಟರೂ ಮ್ಯಾಚು ಗೆದ್ದರು.

ತಾನೂ ಶೋ! ಮೂರು ಲೋಕಾನೂ ಶೋ.

ಗಂಡ ಭಂಡರ ಜಗಳದಲ್ಲಿ ಮಗು ಮೇಲೆ ಬಾಂಬು.

---

ಅರುಣಾ

ಗರ್ಭಾಶಯ
ರೋಗನಿವಾರಿಣಿ

1898-1946






**Await at STATES PICTURE HOUSE**

BANGALORE CITY

WITH JAGAT PICTURES

# SHAIR



CREATORS OF THE SUPER COMEDY

**SUNHERE DIN**

SURAIYA, DEV-ANAND

KAMINIKAUSAL, AGHA & CUCKOO

**Now running to packed auditorium in Andhra Desa**

FOR PARTICULARS:

**Hind Republic Pictures,**

185, Gandhi Nagar - - - Bangalore 2

ಮಾರ್ಚಿ ಪ್ರಥಮ ವಾರದಲ್ಲಿ

ಬೆಂಗಳೂರು **ಶಾರದಾ** ಟಾಕಿಸ್‌ನಲ್ಲಿ

ಪ್ರದರ್ಶನವನ್ನು ನಿರೀಕ್ಷಿಸಿರಿ





ಶೋಭನಾಚಲ ಮತ್ತು

ಎಂ. ಆರ್. ಎ. ರವರ

# ಲಕ್ಷ್ಮಮ್ಮ

(ತೆಲುಗು)

ಕೃಷ್ಣವೇಣಿ, ಕುಮಾರಿ ರುಕ್ಮಿಣಿ, ನಾರಾಯಣರಾವ್,
ಡಾ|| ಜಿ. ವಿ. ಸುಬ್ಬರಾವ್, ಹೇಮಲತಾ,
ಲಿಂಗಮೂರ್ತಿ ಮುಂತಾದವರ

—— ಅಭಿನಯ ——

ಮೈಸೂರು ಸಂಸ್ಥಾನದ ಇತರ ಕೇಂದ್ರಗಳಲ್ಲಿ
ಶೀಘ್ರದಲ್ಲಿಯೇ ನಿರೀಕ್ಷಿಸಿ



Distributors for Mysore State, Coorg & S. Canara :

**YASODHARA FILMS CORPORATION**

GANDHI NAGAR, BANGALORE 2

ನಂಬಿಕೆಗೆ ಅರ್ಹತೆ!

★ ಅತ್ಯುತ್ತಮ ಟಾಯಿಲೆಟ್ ಸಾಬೂನಿನಲ್ಲಿ

★ ನೀವು ಏನೇನು ಗುಣಗಳನ್ನು

★ ಅಪೇಕ್ಷಿಸುವಿರೋ ಅವೆಲ್ಲಾ

# ಮೈಸೂರು ಸ್ಯಾಂಡಲ್ ಸೋಪಿನಲ್ಲಿ

ಇರುವುವು ಎಂದು ಖಚಿತವಾಗಿ ಹೇಳುತ್ತೇವೆ.



—: ಎಲ್ಲಾ ಕಡೆಗಳಲ್ಲೂ ದೊರಕುವುದು :—

ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು

# VITOFERRIN




TRAD MARK

ಶ್ರೇಷ್ಠತೆಯ ಹೆಗ್ಗುರುತು

---

# —ವೈಟೋಫೆರಿನ್—

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್ ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.

★ ★

ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್**
**ಲ್ಯಾಬೋರಟರಿ, ಲಿಮಿಟೆಡ್**

ಮಲ್ಲೇಶ್ವರಂ : : ಬೆಂಗಳೂರು 3.

# 24-2-1950 ರಿಂದ

## ದಿನವಹಿ 3 ಪ್ರದರ್ಶನಗಳು

ಬೆಂಗಳೂರು

**ಶಿವಾಜಿ-ಸ್ವಸ್ತಿಕ್ ಮತ್ತು ರೂಪ್‌ಮಹಲ್**

ಚಿತ್ರಮಂದಿರಗಳಲ್ಲಿ

**ಮೈಸೂರು ನ್ಯೂ ಅಪೇರಾ ದಲ್ಲಿಯೂ ಸಹ**



ಮಾಡರನ್ ಥಿಯೇಟರ್ಸ್‌ರವರ ಮಹೋನ್ನತ ಚಿತ್ರ

# ಪೊನ್‌ಮುಡಿ

(ತಮಿಳು)

ತಾರಾಗಣ :—ಮಾಧುರಿದೇವಿ, ನರಸಿಂಹ ಭಾರತಿ,
ಬಾಲಸುಬ್ರಹ್ಮಣ್ಯಂ, ಲಲಿತ-ಪದ್ಮಿನಿ

**R. V. PICTURES RELEASE.**

## ಈ ದಿನವೇ ನೋಡಿ !



ವಾಹಿನಿ ಯವರ

# ಗುಣಸುಂದರಿ

ಕಥೆ



ಕಿಕ್ಕಿರಿದ ಪ್ರೇಕ್ಷಕ ವೃಂದಕ್ಕೆ ಪ್ರದರ್ಶಿತ
ವಾಗುತ್ತಿರುವ ಕೇಂದ್ರಗಳು

ಬೆಂಗಳೂರು **ಮೂವಿಲ್ಯಾಂಡ್ & ಶ್ರೀ**

ಚಿಕ್ಕಬಳ್ಳಾಪುರ: **ಬಾಲಾಜಿ**



**ಮೋತಿ ಟಾಕೀಸ್**  **ಲಕ್ಷ್ಮೀ**

ದಾವಣಗೆರೆ ದೊಡ್ಡಬಳ್ಳಾಪುರ

## A TALLAM RELEASE

## ಮಾರ್ಚಿ ತಿಂಗಳಿನಲ್ಲಿ ಅಮೋಘ ಪ್ರಾರಂಭ !!

ಪ್ರತಿಭಾರವರ

# ಶ್ರೀ ಲಕ್ಷ್ಮಮ್ಮ ಕಥಾ (ತೆಲುಗು)

a TALLAM Release

ಡೈರಕ್ಟರ್
ಜಿ ಬಲರಾಮಯ್ಯ

ಅಂಜಲೀದೇವಿ...ನಾಗೇಶ್ವರರಾವ್...ಶಿವರಾವ್...ಜಿ.ವರಲಕ್ಷ್ಮಿ...ಸೂರ್ಯಪ್ರಭ...ಪ್ರಭಾಕರರಾವ್

ಬೆಂಗಳೂರು

# ವಿಜಯಾ—ಮಿನರ್ವ

ಮತ್ತು

## ಮೈಸೂರು ಪ್ರಭಾ ಪಿಕ್ಚರ್ ಹೌಸ್

**ಮತ್ತು ಇತರ ಕೇಂದ್ರಗಳಲ್ಲಿ ಶೀಘ್ರದಲ್ಲಿಯೇ ಪ್ರದರ್ಶಿತವಾಗಲಿದೆ.**

★  ★


Printed by B S. Iyengar, Bangalore City
Publisher—B N Gupta Editor—M. Sivaram.